CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೦, ೨೦೦೫ (ಆಶ್ವಯುಜ ೨೮, ಶಕ ವರ್ಷ ೧೯೨೭) | ಸಂಚಿಕೆ ೪೧ |
| --- | --- | --- |

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಇಂಧನ ಸಚಿವಾಲಯ

**ವಿಷಯ:** ಮೆ: ಶ್ರೀ ಹಳ್ಳಿಕೇಶ್ವರ ಎನರ್ಜಿ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ 0.5 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹ0ಚಿಕೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತ ಸ0ಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸ0ಖ್ಯೆ: ಕೆಆರ್ಇಡಿ/06/ಹೆಬ್ಬಹಳ್ಳ/2005/1357 ದಿನಾ0ಕ 22/23.7.2005.

2. ದಿನಾ0ಕ 28.7.2005 ರ0ದು ನಡೆದ ಹ0ಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಶ್ರೀ ಹಳ್ಳಿಕೇಶ್ವರ ಎನರ್ಜಿ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಚಿಕ್ಕಮಂಡ್ಯದ ಬೇಲೂರು ಗ್ರಾಮದ ಬಳಿ ಹೆಬ್ಬಹಳ್ಳ ಹೊಳೆಗೆ ಅಡ್ಡಲಾಗಿ ಕಟ್ಟಿರುವ ಒಡ್ಡಿಗೆ ಹೊಂದಿಕೊಂಡಂತೆ 0.5 ಮೆಗಾವ್ಯಾಟ್ ಸಾಮರ್ಥ್ಯದ ಹೆಬ್ಬಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹ0ಚಿಕೆ ಸಮಿತಿ ಸಭೆ ನಡವಳಿಯಲ್ಲಿ ಅನುಮೋದಿಸಿದ್ದರನ್ವಯ ಕೂಲ0ಕಷವಾಗಿ ಪರಿಶೀಲಿಸಿದ್ದು ನ0ತರ ಈ ಕೆಳಗಿನ0ತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸ0ಖ್ಯೆ: ಇಂಇ 211 ಎನ್‌ಸಿಇ 2005 ಬೆ0ಗಳೂರು, ದಿನಾಂಕ 31ನೇ ಆಗಸ್ಟ್ 2005.**

ಮೆ: ಶ್ರೀ ಹಳ್ಳಿಕೇಶ್ವರ ಎನರ್ಜಿ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ ಮಂಡ್ಯ ಜಿಲ್ಲೆಯ ಮಂಡ್ಯ ತಾಲ್ಲೂಕಿನ ಚಿಕ್ಕಮಂಡ್ಯದ ಬೇಲೂರು ಗ್ರಾಮದ ಬಳಿ ಹೆಬ್ಬಹಳ್ಳ ಹೊಳೆಗೆ ಅಡ್ಡಲಾಗಿ ಕಟ್ಟಿರುವ ಒಡ್ಡಿಗೆ ಹೊಂದಿಕೊಂಡಂತೆ 0.5 ಮೆಗಾವ್ಯಾಟ್ ಸಾಮರ್ಥ್ಯದ ಹೆಬ್ಬಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕೆಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬ0ಧನೆಗೊಳಪಟ್ಟು ಹ0ಚಿಕೆ ಮಾಡಲಾಗಿದೆ:–

1. (ಅ) ಹ0ಚಿಕೆದಾರರು ಈ ಅದೇಶ ಹೊರಡಿಸಿದ ಮೂರು ತಿ0ಗಳ ಒಳಗಾಗಿ ಸರ್ಕಾರದೊ0ದಿಗೆ ಒಡ0ಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹ0ಚಿಕೆ ತ0ತಾನೇ ರದ್ದಾಗುವುದು. ನ0ತರ, ಕ0ಪೆನಿಯು ಹ0ಚಿಕೆಗೋಸ್ಕರ ಮನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿ0ದಿರುಗಿಸಲಾಗುವುದಿಲ್ಲ.

   (ಆ) ಅ0ತಹ ಒಡ0ಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊ0ಡು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡ0ಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒ0ದಕ್ಕೆ ರೂ. 25,000.00 ದ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದ0ತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊ0ಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊ0ದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿ0ಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹ0ಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅ0ಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹ0ಚಿಕೆಯು ತ0ತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆ0ದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸ0ದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊ0ದಿಗೆ ವೀಲಿ0ಗ್ ಅ0ಡ್ ಬ್ಯಾ0ಕಿ0ಗ್ ಒಡ0ಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸ0ದರ್ಭದಲ್ಲಿ ವಿದ್ಯುತ್ ಖರೀದಿ ಒಡ0ಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹ0ಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸ0ಬ0ಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1295

**ಸುರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆ: ಶ್ರೀ ಎಸ್.ಎನ್.ಎಸ್. ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ 10 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ – ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತ ಸ0ಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸ0ಖ್ಯೆ : ಕೆಆರ್‌ಇಡಿ/06/ಉಯಂಬಳ್ಳಿದೊಡ್ಡಿ/2003/434 ದಿನಾ0ಕ 05.3.2004.

2. ದಿನಾ0ಕ 28.7.2005 ರ0ದು ನಡೆದ ಹ0ಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಶ್ರೀ ಎಸ್.ಎನ್.ಎಸ್. ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಚುಂಚಿದೊಡ್ಡಿ ಗ್ರಾಮದ ಬಳಿ ಅರ್ಕಾವತಿ ನದಿಗೆ ಅಡ್ಡಲಾಗಿ 10 ಮೆಗಾವ್ಯಾಟ್ ಸಾಮರ್ಥ್ಯದ ಉಯಂಬಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಹ0ಚಿಕೆ ಮಾಡುವ0ತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಓದಲಾದ (2)ರಲ್ಲಿ ಹೇಳಿದ ಹ0ಚಿಕೆ ಸಮಿತಿ ಸಭೆ ನಡವಳಿಯಲ್ಲಿನ ಕಿರು ಜಲ ವಿದ್ಯುತ್ ಹಂಚಿಕೆಯಲ್ಲಿನ ಕ್ರಮ ಸಂಖ್ಯೆ : 22 ರಲ್ಲಿ ಅನುಮೋದಿಸಿದ್ದರನ್ವಯ ಕೂಲ0ಕಷವಾಗಿ ಪರಿಶೀಲಿಸಿದ್ದು ನ0ತರ ಈ ಕೆಳಗಿನ0ತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸ0ಖ್ಯೆ: ಇ0ಇ 107 ಎನ್‌ಸಿಇ 2004 ಬೆ0ಗಳೂರು, ದಿನಾ0ಕ 31ನೇ ಆಗಸ್ಟ್ 2005.**

ಮೆ: ಶ್ರೀ ಎಸ್.ಎನ್.ಎಸ್. ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕ0ಪೆನಿಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನ ಚುಂಚಿದೊಡ್ಡಿ ಗ್ರಾಮದ ಬಳಿ ಅರ್ಕಾವತಿ ನದಿಗೆ ಅಡ್ಡಲಾಗಿ 10 ಮೆಗಾವ್ಯಾಟ್ ಸಾಮರ್ಥ್ಯದ ಉಯಂಬಳ್ಳಿ ಕಿರು ಜಲ ವಿದ್ಯುತ್ ಯೋಜನೆಯನ್ನು ಜಲ ಸಂಪನ್ಮೂಲ ಇಲಾಖೆಯ ಅನುಮತಿ ಪಡೆಯಬೇಕೆಂಬ ಷರತ್ತಿನೊಂದಿಗೆ ಈ ಕೆಳಗಿನ ನಿಬ0ಧನೆಗೊಳಪಟ್ಟು ಹ0ಚಿಕೆ ಮಾಡಲಾಗಿದೆ:–

1. (ಅ) ಹ0ಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿ0ಗಳ ಒಳಗಾಗಿ ಸರ್ಕಾರದೊ0ದಿಗೆ ಒಡ0ಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹ0ಚಿಕೆ ತ0ತಾನೇ ರದ್ದಾಗುವುದು. ನ0ತರ, ಕ0ಪೆನಿಯು ಹ0ಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿ0ದಿರುಗಿಸಲಾಗುವುದಿಲ್ಲ.

(ಆ) ಅ0ತಹ ಒಡ0ಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊ0ಡು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡ0ಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒ0ದಕ್ಕೆ ರೂ. 25,000.00 ದ0ತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದ0ತೆ ಪಾವತಿಸತಕ್ಕದ್ದು.

2 (ಅ) ಯೋಜನಾ ಅಭಿವೃದ್ಧಿದಾರರು ಸ0ಬ0ಧಪಟ್ಟ ಎಲ್ಲಾ ಇಲಾಖೆಗಳಿ0ದಲೂ ಅ0ದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯ0ತ್ರಣ ಮ0ಡಳಿ ಮತ್ತು ಕ0ದಾಯ ಇಲಾಖೆಗಳಿ0ದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡ0ಬಡಿಕೆ ಮಾಡಿಕೊ0ಡ ಒ0ದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹ0ಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊ0ದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾ0ತ್ರಿಕ ಅನುಮೋದನೆ ಕೊಟ್ಟ ಆರು ತಿ0ಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿ0ಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹ0ಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಟಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಟಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1296

**ಸುರೇಶ್.ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಎಸ್.ರಮೇಶ್, ಮಾಜಿ ಪಿಸಿ 7403, ಕೆ.ಆರ್.ಪುರಂ ಪೊಲೀಸ್ ಠಾಣೆ, ಬೆಂಗಳೂರು ನಗರ ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ ಪೂರ್ವ ವಿಭಾಗ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:ಡಿಇ/ಆರ್ 6/4/ಪೂವಿ/2003. ದಿನಾಂಕ:05-02-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:3/ಅಪೀಲು/2004. ದಿನಾಂಕ:22-05-2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:15-11-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/72/2004. ದಿನಾಂಕ: 16-05-2005.

**ಪ್ರಸ್ತಾವನೆ:**

ಶ್ರೀ ಎಸ್.ರಮೇಶ್, ಮಾಜಿ ಪಿಸಿ 7403, ಕೆ.ಆರ್.ಪುರಂ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ನೀವು ದಿನಾಂಕ:25-09-2002 ರಿಂದ ಠಾಣೆಗೆ ಯಾವುದೇ ಮುನ್ಸೂಚನೆ ನೀಡದೆ, ಮೇಲಧಿಕಾರಿಗಳಿಂದ ರಜೆ ಮಂಜೂರು ಮಾಡಿಸಿಕೊಳ್ಳದೇ ಹಾಗೂ MHS ಪುಸ್ತಕ ಸಹ ತೆಗೆದುಕೊಳ್ಳದೇ ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ ಪೂರ್ವ ವಿಭಾಗ, ಬೆಂಗಳೂರು ನಗರ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:05-02-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಜಂಟಿ ಪೊಲೀಸ್ ಕಮೀಷನರ್ ಆಡಳಿತ ಮತ್ತು ಸಿಎಆರ್ ಬೆಂಗಳೂರು ಇವರು ಮೇಲ್ಮನವಿಯನ್ನು ಪರಿಶೀಲಿಸಿ, ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:22-05-2004ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಭಾಗಶ: ಮಾರ್ಪಡಿಸಿ, ಅರ್ಜಿದಾರರನ್ನು `ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದ` ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಅನಾರೋಗ್ಯದಿಂದ ಇದ್ದಾಗ ದೂರವಾಣಿ ಮುಖಾಂತರವಾದರೂ ಕಚೇರಿಗೆ ತಿಳಿಸದೆ, ಗೈರುಹಾಜರಿ ಆಗಿದ್ದು, ವೈದ್ಯರ ಪ್ರಮಾಣ ಪತ್ರದಲ್ಲಿ ದಿನಾಂಕ:01-03-2003 ರಿಂದ ಕರ್ತವ್ಯಕ್ಕೆ ಹಾಜರಾಗಬಹುದೆಂದು ತಿಳಿಸಿದ್ದರೂ, ಕಚೇರಿಗೆ ಹಾಜರಾಗಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದರೂ, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಇವರ ಉದ್ದಟತನಕ್ಕೆ ಸಾಕ್ಷಿ ಆಗಿರುತ್ತದೆ. ಈ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರವು ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿದ್ದು, ಮೇಲ್ಮನವಿ ಪ್ರಾಧಿಕಾರಿಯು, ಮಾನವೀಯತೆಯ ದೃಷ್ಟಿಯಿಂದ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರನ್ನು ಕಡ್ಡಾಯ ನಿವೃತ್ತಿಗೊಳಿಸಿರುತ್ತಾರೆ. ಹಾಗೂ ಕೆಸಿಎಸ್ಆರ್‌ನ ನಿಯಮ 218 ರನ್ವಯ ಲಭ್ಯವಿರುವ ಪಿಂಚಣಿ ಸವಲತ್ತುಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಆದೇಶಿಸಿರುತ್ತಾರೆ. ಆದ್ದರಿಂದ ಈ ಆದೇಶಗಳಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 238 ಪೊಸಿಅ 2004 ಬೆಂಗಳೂರು, ದಿನಾಂಕ: ,,,, ಸೆಪ್ಟೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಾವಳಿ, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್.ರಮೇಶ್ ಮಾಜಿ ಪಿಸಿ 7403 ಕೆ.ಆರ್.ಪುರಂ ಪೊಲೀಸ್ ಠಾಣೆ ಬೆಂಗಳೂರು, ಇವರು ಸರ್ಕಾರಕ್ಕೆ ದಿನಾಂಕ:15-11-2004ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಗುಂಡೂರಾವ್**

ಪಿ.ಆರ್. 1333

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಮಹಮ್ಮದ್ ಇಬ್ರಾಹಿಂ ಸಾಹೇಬ್, ಮಾಜಿ ಎಪಿಸಿ 191, ಚಿಕ್ಕಮಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ ಇವರ ಆದೇಶ ಸಂಖ್ಯೆ: ಡಿಇ/10/2003, ಓಬಿ ಸಂಖ್ಯೆ:201/ಎ/2004. ದಿನಾಂಕ:22-09-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಮತ್ತು ಪಶ್ಚಿಮ ವಲಯ, ಮಂಗಳೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ ಮೇಲ್ಮನವಿ/6/2004-05 ದಿನಾಂಕ:10-03-2005.
3. ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:04-04-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/54/2005, ದಿನಾಂಕ:21-06-2005.

**ಪ್ರಸ್ತಾವನೆ:**

ಶ್ರೀ ಮಹಮ್ಮದ್ ಇಬ್ರಾಹಿಂ ಸಾಹೇಬ್, ಮಾಜಿ ಎಪಿಸಿ 191 ಚಿಕ್ಕಮಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಆರೋಪಿತ ನೌಕರರುಗಳು ದಿನಾಂಕ:23-10-2003 ರಂದು ರಾತ್ರಿ ಚಿಕ್ಕಮಂಗಳೂರಿನ ರಾಮನಹಳ್ಳಿಯಲ್ಲಿ ಹೊಸದಾಗಿ ನಿರ್ಮಿಸಲ್ಪಟ್ಟಿರುವ ಪೊಲೀಸ್ ವಸತಿ ಗೃಹ `ಎ` ಲೈನಿನ ಮೂರನೇ ನಂಬರಿನ ಮನೆಯಲ್ಲಿ ಸಾರ್ವಜನಿಕ ವ್ಯಕ್ತಿಯೊಂದಿಗೆ ಸೇರಿಕೊಂಡು, ಒಂದು ಹುಡುಗಿಯನ್ನು ಕರೆದುಕೊಂಡು ಬಂದು ವ್ಯಭಿಚಾರ ಲೈಂಗಿಕ ಕ್ರಿಯೆಯನ್ನು ಸಾಮೂಹಿಕವಾಗಿ ನಡೆಸಿ, ಬಸವನಹಳ್ಳಿ ಠಾಣೆ ಮೊ.ಸಂ:131/03, 8 ಕ್ಲಾಸ್ (ಎ), (ಬಿ) ಪಿ.ಐ ಆಕ್ಟ್ ಪ್ರಕರಣದಲ್ಲಿ ಆರೋಪಿಗಳಾಗಿರುತ್ತಾರೆ. ಮತ್ತು ಸಂಸಾರಸ್ಥರು ವಾಸ ಮಾಡುವ ವಸತಿ ಗೃಹಗಳ ಮಧ್ಯೆ ವ್ಯಭಿಚಾರ ನಡೆಸಿ, ಸಾರ್ವಜನಿಕರಲ್ಲಿ ಪೊಲೀಸ್ ಇಲಾಖೆಯ ಬಗ್ಗೆ ಕೀಳಿರಿಮೆ ಉಂಟಾಗಲು ಕಾರಣರಾಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:22-09-2004ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುವ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪಶ್ಚಿಮ ವಲಯ, ಮಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ:10-03-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲಿನ ದೋಷಾರೋಪಣೆಗಳು ಇಲಾಖಾ ವಿಚಾರಣೆ ವೇಳೆ ದೊರೆತ ಸಾಕ್ಷ್ಯಾಧಾರಗಳಿಂದ ಸಾಬೀತಾಗಿದೆ. ಇಲಾಖಾ ವಿಚಾರಣೆ ವೇಳೆ ಅವರಿಗೆ ಪ್ರತಿರಕ್ಷಿಸಿಕೊಳ್ಳಲು ನಿಯಮ ಬದ್ಧವಾದ ಎಲ್ಲಾ ಅವಕಾಶಗಳನ್ನು ನೀಡಲಾಗಿದೆ ಆದರೂ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪರಿಗಣಿಸಲು ಯಾವುದೇ ಹೊಸ ಅಂಶಗಳನ್ನು ಮಂಡಿಸಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಕಂಡು ಬರುತ್ತದೆ. ಅರ್ಜಿದಾರರ ಆರೋಪಕ್ಕೆ ತಕ್ಕದಾದ ಶಿಕ್ಷೆ ವಿಧಿಸಿದ್ದು, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 132 ಪೊಸಿಅ 2005 ಬೆಂಗಳೂರು, ದಿನಾಂಕ: .... ಸೆಪ್ಟೆಂಬರ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಮಹಮ್ಮದ್ ಇಬ್ರಾಹಿಂ ಸಾಹೇಬ್, ಮಾಜಿ ಎಪಿಸಿ 191 ಚಿಕ್ಕಮಗಳೂರು ಇವರು ಸರ್ಕಾರಕ್ಕೆ ದಿನಾಂಕ: 04-04-2005 ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಗುಂಡೂರಾವ್**

ಪಿ.ಆರ್. 1334

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಡಿ.ಎಸ್.ಮಲ್ಲಿಕಾರ್ಜುನಪ್ಪ, ಆರ್‌ಪಿಐ., ಡಿಎಆರ್., ದಾವಣಗೆರೆರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ:ಸಿಬ್ಬಂದಿ 2/ಡಿಇ/20/2002-03 ಓಬಿ ಸಂಖ್ಯೆ:142/2003-04. ದಿನಾಂಕ: 27-09-2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಅಪೀಲು/8/31/2004-05. ದಿನಾಂಕ:06-04-2005.

3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:02-09-2004.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/8/31/2004-05, ದಿನಾಂಕ:15-04-2005.

**ಪ್ರಸ್ತಾವನೆ:**

ಶ್ರೀ ಜಿ.ಎಸ್. ಮಲ್ಲಿಕಾರ್ಜುನಪ್ಪ, ಆರ್‌ಪಿಐ, ದಾವಣಗೆರೆ ಜಿಲ್ಲೆ, ಈ ಹಿಂದೆ (ಆರ್‌ಪಿಐ, ಡಿಎಆರ್ ಶಿವಮೊಗ್ಗ ಜಿಲ್ಲೆ) ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಶ್ರೀ ಜಿ.ಎಸ್.ಮಲ್ಲಿಕಾರ್ಜುನಪ್ಪ, ಆರ್‌ಪಿಐ ಡಿಎಆರ್, ಶಿವಮೊಗ್ಗ ಜಿಲ್ಲೆ (ಹಾಲಿ ಆರ್‌ಪಿಐ, ಡಿಎಆರ್ ದಾವಣಗೆರೆ) ಆದ ನೀವು ಶ್ರೀ ದೊಡ್ಡೇಗೌಡ ಇವರಿಂದ ಅವರ ಮಗ ಡಿ.ಮಂಜುನಾಥ ಇವರು ಎಪಿಸಿ ಹುದ್ದೆಗೆ ಆಯ್ಕೆ ಆದ ನಂತರ ಪೊಲೀಸ್ ಅಧೀಕ್ಷಕರವರ ಹೆಸರಿನಲ್ಲಿ ಹಣ ಕೊಡದಿದ್ದಲ್ಲಿ ವೈದ್ಯಕೀಯ ಪರೀಕ್ಷೆಯಲ್ಲಿ ಅನ್‌ಫಿಟ್ ಮಾಡಿಸುವುದಾಗಿ ಮತ್ತು ಕೆಲಸದಿಂದ ತೆಗೆದುಹಾಕುವುದಾಗಿ ಬೆದರಿಸಿ ರೂ.35,000/-ಗಳನ್ನು ಅಕ್ರಮ ಹಾಗೂ ಒತ್ತಾಯ ಪೂರ್ವಕವಾಗಿ ಪಡೆದು ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವ ಬಗ್ಗೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು ಪೂರ್ವ ವಲಯ, ದಾವಣಗೆರೆ, ಇವರು ಮೇಲೆ ಕ್ರಮ ಸಂಖ್ಯೆ: (1) ರಲ್ಲಿ ಓದಲಾದ ದಿನಾಂಕ:27-09-2003ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಐದು (5) ವರ್ಷಗಳ ಕಾಲ ಮುಂದಿನ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ದ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಸಮರ್ಥನೀಯವಾದ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ: 06-04-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರ ಮೇಲೆ ಹೊರಿಸಿರುವ ಆರೋಪ ಸ್ಪಷ್ಟವಾಗಿದೆ ಎಪಿಸಿ ಹುದ್ದೆಗೆ ಆಯ್ಕೆಯಾಗಿದ್ದ ಅಭ್ಯರ್ಥಿಯನ್ನು ವೈದ್ಯಕೀಯ ಪರೀಕ್ಷೆಯಲ್ಲಿ ಅನರ್ಹಗೊಳಿಸುವುದಾಗಿ ಹೆದರಿಸಿ, ಅವರಿಂದ ಹಣವನ್ನು ಅಕ್ರಮವಾಗಿ ಪಡೆದಿರುವ ಬಗ್ಗೆ ಸ್ಪಷ್ಟವಾದ ಆರೋಪ ಹೊರಿಸಲಾಗಿದೆ ಅರ್ಜಿದಾರರು ತಮ್ಮ ಮೇಲಿನ ಆರೋಪ ಸ್ಪಷ್ಟವಾಗಿಲ್ಲ ಎಂಬ ವಾದದಲ್ಲಿ ಹುರುಳಿರುವುದಿಲ್ಲ, ಅರ್ಜಿದಾರರು ತನ್ನನ್ನು ರಕ್ಷಿಸಿಕೊಳ್ಳಲು ಶಿವಮೊಗ್ಗ ಎಸ್‌ಪಿ ರವರ ಹೆಸರನ್ನು ಈ ಪ್ರಕರಣದಲ್ಲಿ ಎಳೆದಿರುವುದು ಇವರ ಉದ್ಧಟತನ ಕಾಣುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಕಂಡು ಬರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಲಘು ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 186 ಪೊಸಿಅ 2004 ಬೆಂಗಳೂರು ದಿನಾಂಕ: .... ಆಗಸ್ಟ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ,ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಎಸ್..ಮಲ್ಲಿಕಾರ್ಜುನಪ್ಪ ಆರ್‌ಪಿಐ ಡಿಎಆರ್ ದಾವಣಗೆರೆ ಇವರು ಸರ್ಕಾರಕ್ಕೆ ದಿನಾಂಕ:02-09-2004 ರಂದು ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಗುಂಡೂರಾವ್**

ಪಿ.ಆರ್. 1236

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ**: ಶ್ರೀ ಡಿ.ವಿ.ಕಾಂಬಳೆ, ಪಿ.ಐ., ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬಿಜಾಪೂರ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬಿಜಾಪೂರ, ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ-6/ಪಿಆರ್-81/2001, ಓಬಿ ಸಂಖ್ಯೆ:398/2001. ದಿನಾಂಕ:09-10-2001.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಉತ್ತರ ವಲಯ ಬೆಳಗಾವಿ ಇವರ ಆದೇಶ ಸಂಖ್ಯೆ:ಅಪೀಲು/40 /2002-03. ದಿನಾಂಕ:29-03-2003.
3. ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:28-01-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಸಿಬಿ/8/2005-2006, ದಿನಾಂಕ:29-06-2005.

**ಪ್ರಸ್ತಾವನೆ:**

ಶ್ರೀ ಡಿ.ವಿ.ಕಾಂಬಳೆ, ಪಿಐ, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬಿಜಾಪೂರ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ದಿನಾಂಕ:01-04-2001 ರಂದು ವರದಿಯಾದ ಇಂಡಿ ಪೊಲೀಸ್ ಠಾಣೆ ಸಿಆರ್ ನಂ. 65/2001, ಕಲಂ 279,304-ಎ ಐಪಿಸಿ ನೇದ್ದರಲ್ಲಿ ಹಾಗೂ ದಿನಾಂಕ:12-05-2001 ರಂದು ವರದಿಯಾದ ಹೋರ್ತಿ ಪೊಲೀಸ್ ಠಾಣೆ ಸಿಆರ್ ನಂ.69/2001,ಕಲಂ 279, 304-ಎ ಐಪಿಸಿ ನೇದರಲ್ಲಿ ಒಳಗೊಂಡ ವಾಹನಗಳನ್ನು ಎಂ.ವಿ.ಪರೀಕ್ಷೆಯ ನಂತರ, ಅದರ ಮಾಲೀಕರಿಗೆ 100-00 ರೂ ಬಾಂಡ್ ಬರೆಸಿಕೊಂಡು, ಬಿಡದೇ, ಕಾನೂನು ಸುತ್ತೋಲೆ ಸಂಖ್ಯೆ:4984 ನೇದ್ದಕ್ಕೆ, ವಿರುದ್ಧವಾಗಿ ನಡೆದುಕೊಂಡು, ಸದರಿ ವಾಹನವನ್ನು ವಿನಾಕಾರಣ ಜಪ್ತಿ ಮಾಡಿ, ಪಿಎಫ್ ಹಾಕಿದ್ದೀರಿ. ಈ ಬಗ್ಗೆ ಡಿಎಸ್‌ಪಿ, ಇಂಡಿ ಇವರ ನಿರ್ದೇಶನಗಳನ್ನು ಸಹ ಅಮಾನ್ಯ ಮಾಡಿದ್ದೀರಿ. ಈ ಮೂಲಕ ನೀವು, ಮೇಲಧಿಕಾರಿಗಳ ಆದೇಶ ಅಮಾನ್ಯ ಮಾಡಿ, ನಿಮ್ಮ ಕರ್ತವ್ಯದಲ್ಲಿ ಘೋರ ಅಶಿಸ್ತು ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು ಬಿಜಾಪುರ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:09-10-2001ರ ಆದೇಶದಲ್ಲಿ ಅರ್ಜಿದಾರರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಭವಿಷ್ಯದ ವೇತನ ಬಡ್ತಿಗಳಿಗೆ ಪರಿಣಾಮ ಬೀರದಂತೆ ಮೂರು ತಿಂಗಳಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ, ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರ್ದೇಶಕರು ಉತ್ತರ ವಲಯ ಬೆಳಗಾವಿ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:29-03-2003ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಸಂಬಂಧಪಟ್ಟ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಒಬ್ಬ ಜವಾಬ್ದಾರಿ ಹುದ್ದೆಯ ಅಧಿಕಾರಿಯಾಗಿದ್ದು, ಮೇಲಧಿಕಾರಿಗಳ ಆದೇಶವನ್ನು ಪಾಲಿಸುವುದು ಅವರ ಆದ್ಯ ಕರ್ತವ್ಯವಾಗಿರುತ್ತದೆ. ಕಾನೂನು ಶಾಖೆಯ ಸುತ್ತೋಲೆಯಲ್ಲಿ ಸೂಚಿಸಿದಂತೆ ಕ್ರಮ ಕೈಗೊಂಡು, ಅಪಘಾತದಲ್ಲಿಯ ವಾಹನಗಳನ್ನು ಬಿಡುಗಡೆ ಮಾಡಲು ಡಿಎಸ್‌ಪಿ ರವರು ಸೂಚಿಸಿದರೂ ಸಹ ಕ್ರಮ ಕೈಗೊಳ್ಳದೆ ವಿಫಲಗೊಂಡಿರುವುದು ದಾಖಲೆಗಳಿಂದ ಸ್ಪಷ್ಟವಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿದ್ದು, ಶಿಸ್ತು ಪ್ರಾಧಿಕಾರಿ ದಂಡನೆ ವಿಧಿಸಿರುವುದು ಸ್ಪಷ್ಟವಾಗಿದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 152 ಪೊಸಿಅ 2005 ಬೆಂಗಳೂರು ದಿನಾಂಕ: 16ನೇ ಆಗಸ್ಟ್ 2005.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ವಿ.ಕಾಂಬಳೆ ಪಿಐ, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಬಿಜಾಪುರ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:28-01-2005 ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ.ಗುಂಡೂರಾವ್**

ಪಿ.ಆರ್. 1237

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಗೋಪಾಲ.ಎಸ್.ಕೋಲ್ಹಾರ್, ದ್ವಿತೀಯ ದರ್ಜೆ ಸಹಾಯಕ, ರವರ ಖಾಯಂಪೂರ್ವ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** 1. ಮಹಾ ನಿರೀಕ್ಷಕರು ಮತ್ತು ಅರಕ್ಷಕ ಮಹಾ ನಿರ್ದೇಶಕರ ಪತ್ರದ ಸಂಖ್ಯೆ:13ಸಿಬ್ಬಂದಿ(5)/02-03 ದಿ:22-11-2002, 07-10-2003, 12-01-2005 ಹಾಗೂ 30-04-2005.

**ಪ್ರಸ್ತಾವನೆ:**

ಶ್ರೀ ಗೋಪಾಲ ಎಸ್.ಕೋಲ್ಹಾರ್, ದ್ವಿತೀಯ ದರ್ಜೆ ಸಹಾಯಕ ಜಿಲ್ಲಾ ಪೊಲೀಸ್ ಕಛೇರಿ ಹಾವೇರಿ ರವರು ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 251 ಪಿಇಸಿ 80 ದಿನಾಂಕ:29-04-1981ರ ಪ್ರಕಾರ ಅನುಕಂಪದ ಆಧಾರದ ಮೇಲೆ ದಲಾಯತ್ ಹುದ್ದೆಗೆ ನೇಮಕಗೊಂಡು ದಿನಾಂಕ:10-07-1981 ರಂದು ಪೂರ್ವ ವಲಯ ಕಛೇರಿ ದಾವಣಗೆರೆಯಲ್ಲಿ ವರದಿ ಮಾಡಿಕೊಂಡಿದ್ದು ತರುವಾಯ ಸದರಿಯವರು 1982ನೇ ಸಾಲಿನಲ್ಲಿ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದು, ಸುಮಾರು 9 ವರ್ಷಗಳು ತೃಪ್ತಿಕರವಾಗಿ ಸೇವೆಯನ್ನು ಸಲ್ಲಿಸಿರುವ ಮೇರೆಗೆ ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್:80: ಎಸ್.ಸಿ.ಆರ್. 84 ದಿನಾಂಕ:26-03-1985 ಮತ್ತು ಸುತ್ತೋಲೆ ಸಂಖ್ಯೆ:2-04-85 ರನ್ವಯ ಪೂರ್ವ ವಲಯ ಕಛೇರಿ ದಾವಣಗೆರೆ ಜ್ಞಾಪನ ಸಂಖ್ಯೆ:ಸಿಬ್ಬಂದಿ:33/91-92 ಮತ್ತು ಒ.ಬಿ.11/91 ದಿನಾಂಕ:08-05-1991ರ ಪ್ರಕಾರ ದಲಾಯತ್ ಹುದ್ದೆಯಿಂದ ದ್ವಿತೀಯ ದರ್ಜೆ ಸಹಾಯಕ ಹುದ್ದೆಗೆ ಮುಂಬಡ್ತಿ ನೀಡಿ ಜಿಲ್ಲಾ ಪೊಲೀಸ್ ಕಛೇರಿ ಬಳ್ಳಾರಿಗೆ ಸ್ಥಳ ನಿಯುಕ್ತಿಗೊಳಿಸಲಾಗಿದ್ದು ಅವರು ದಿನಾಂಕ:20-05-1991ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಸದರಿಯವರು ನೇಮಕಾತಿ ನಿಯಮಾವಳಿಯ ನಿಯಮ 19 ಉಪ ನಿಯಮ 3(ಎ) ಪ್ರಕಾರ ಒಂದು ವರ್ಷದ ಖಾಯಂ ಪೂರ್ವ ಅವಧಿಯಲ್ಲಿ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಾದ ಪೊಲೀಸ್ ಮ್ಯಾನುಯಲ್ ಮತ್ತು ಅಕೌಂಟ್ಸ್ ಲೋಯರ್‌ಗಳನ್ನು ಪಾಸು ಮಾಡಬೇಕಾಗಿದ್ದು, ಪಾಸು ಮಾಡದೇ ಇದ್ದ ಮೇರೆಗೆ ಇವರ ಖಾಯಂ ಪೂರ್ವ ಅವಧಿಯನ್ನು ದಿನಾಂಕ:20-05-93 ರಿಂದ 19-05-94 ರವರೆಗೆ ವಿಸ್ತರಿಸಲಾಗಿದ್ದು ಸದರಿಯವರು ಸ್ವತ: ಕೋರಿಕೆಯ ಮೇರೆಗೆ ಬಳ್ಳಾರಿ ಜಿಲ್ಲೆಯ ಸೇವಾ ಜೇಷ್ಠತೆಯನ್ನು ಬಿಟ್ಟು, ಕೊಡುವ ಷರತ್ತಿನ ಮೇರೆಗೆ ಹಾವೇರಿ ಜಿಲ್ಲೆಗೆ ವರ್ಗಾವಣೆ ಹೊಂದಿ ದಿನಾಂಕ:18-05-98 ರಂದು ಕಾರ್ಯ ವಿಮುಕ್ತ ಪಡೆದು ಹಾವೇರಿ ಜಿಲ್ಲೆಯಲ್ಲಿ ದಿನಾಂಕ:19-05-1998 ರಂದು ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಸದರಿಯವರು ನಿಗದಿತ ಇಲಾಖಾ ಪರೀಕ್ಷೆಗಳಾದ ಪೋಲಿಸ್ ಮ್ಯಾನುಯಲ್‌ನ್ನು 1997ನೇ ಮೊದಲ ಅಧಿವೇಶನದಲ್ಲಿ ಉತ್ತೀರ್ಣರಾಗಿದ್ದು, ಅಕೌಂಟ್ಸ್ ಲೋಯರ್‌ನ್ನು 1997ನೇ ಸಾಲಿನ 2ನೇ ಅಧಿವೇಶನದಲ್ಲಿ ಉತ್ತೀರ್ಣರಾಗಿರುತ್ತಾರೆ. ಆದುದರಿಂದ ಶ್ರೀ ಗೋಪಾಲ್ ಎಸ್.ಕೋಲ್ಹಾರ್ ದ್ವಿತೀಯ ದರ್ಜೆ ಸಹಾಯಕ ರವರಿಗೆ ಖಾಯಂ ಪೂರ್ವ ಅವಧಿಯನ್ನು ದಿನಾಂಕ:20-05-94 ರಿಂದ ಇಲಾಖಾ ಪರೀಕ್ಷೆ ಪಾಸಾದ ಅವಧಿ 12-08-98ರವರೆಗೆ ವಿಸ್ತರಿಸಲು ಮಹಾ ನಿರೀಕ್ಷಕರು ಮತ್ತು ಅರಕ್ಷಕ ಮಹಾ ನಿರ್ದೇಶಕರವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಶವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 58 ಪೊಸಿಲಿ 2002 ಬೆಂಗಳೂರು ದಿನಾಂಕ: 26ನೇ ಜುಲೈ 2005.**

ಶ್ರೀ ಗೋಪಾಲ ಎಸ್.ಕೋಲ್ಹಾರ್, ದ್ವಿತೀಯ ದರ್ಜೆ ಸಹಾಯಕರು ಇವರ ಖಾಯಂ ಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು 1977ರ ನಿಯಮ 4(1)(1)ರ ಪ್ರಕಾರ ದಿನಾಂಕ:20-05-94 ರಿಂದ 12-08-1998 ರವರೆಗೆ ವಿಸ್ತರಿಸಿದೆ.

ಈ ಆದೇಶವನ್ನು ಅಂತರಿಕ ಅರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಸಾಇ 35440 ಅಂಅಸ 2005, ದಿ: 8.7.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್.ಕೆ.ಗುಂಡೂರಾವ್**
ಪಿ.ಆರ್. 1142 ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## ENERGY SECRETARIAT

**Subject:** Transfer of **3.2** M.W. Wind Power Capacity in favour of M/s. India Power Corporation Limited Orders-reg.

**Read:**
1. Government order No: DE 26 NCE 1999 dated: 13.5.1999.
2. Government order No: EN 76 NCE 2005 dated: 18.3.2005
3. Letter No. KRED/08/IPCL/2005/1595 dated: 25.8.2005 received from the Managing Director, Karnataka Renewable Energy Development Limited, Bangalore.

**PREAMBLE:**

In the Government Order dated 18.3.2005 read at (2) above, sanction has been accorded for implementation of **192** M.W. capacity Wind Power Project at Chitradurga District to M/s Enercon (India) Limited.

Now, the Managing Director, Karnataka Renewable Energy Development Limited, Bangalore in his letter dated : 25.8.2005 read at (3) above, has recommended to the Government for transfer of **3.2** M.W. Wind Power capacity in favour of M/s. India Power Corporation Limited from out of sanctioned **192** MW Wind Power Capacity at Chitradurga District of M/s Enercon (India) Limited.

The proposal has been examined and pass the following order.

**GOVERNMENT ORDER NO. EN 244 NCE 2005 BANGALORE, DATED: 14TH SEPTEMBER 2005**

Government is pleased to accord sanction for transfer of 3.2 M.W. Wind Power capacity at Gulihosahalli village, Holalkere Taluk, Chitradurga District in favour of M/s. India Power Corporation Limited from out of sanctioned **192** MW Wind Power Capacity Chitradurga District of M/s Enercon (India) Limited.

The terms and conditions of the Government Order read at (1) above, shall **IPSO FACTO** applicable.

By Order and in the Name of the Governor of Karnataka,
**SURESH .B. KRISHNAPPANAVAR**
P.R. 1308 Under Secretary to Government, Energy Department.

## HEALTH & FAMILY WELFARE SECRETARIAT

**Subject:** Withholding of pensionary benefits of Dr. H.C. Veerendra Assistant Professor of Pathology in Bangalore Medical College.

**Read:**
1. G.O.NO. HFW 178 MMC 88 dated 06.08.2002
2. Correspondence resting with letter No. Ge III/M5/2003-04/820-22 dated 18.03.2004 of the Accountant General (A & E)

**PREAMBLE**:

1. In Government Order dated 06.08.2002 the unauthorized absence of Dr. H.C. Veerendra, Assistant Professor of Pathology in Bangalore Medical College, during the period from 25.01.1985 to 31.03.2001 the date on which he attained superannuation has been treated as ‘dies-non’ under rule 107

and 108 of KCSRs. The Accountant General was requested to take cognizance of the said Government Order while settling the pension claims.

2.The Accountant General(A & E) has clarified that the unaauthorized absence of Dr. H.C. Veerendra has been regularized upto the date of superannuation on 31.03.2001. Government is reminding the Accountant General for taking action in implementing the Government Order dated 06.08.2002. The Accountant General has brought the following to the notice of Government.

(i) He has not submitted any pension papers for finalizing his pension case so far ;

(ii) He has joined the Gazetted service on 25.06.1975 without any nongazetted service. He had put in only 9 years and 6 months of total qualifying service;

(iii) The G.O. dated 06.08.2002 indicates the date of superannuation as 31.03.2001. The inference is that he was born in March, 1943. His correct date of birth may be indicated

3. The correct date of birth of Dr.H.C. Veerendra,the then Assistant Professor of Pathology in Bangalore Medical College according to seniority list is 18.03.1943. Obviously his date of superannuation is 31.03.2001. The entire period of his absence from 25.01.1985 to 31.03.2001 has already been treated as 'dies-non' as such he is not entitled to any pensionary benefits. However, in view of grave and serious mis-conduct of unauthorized absence from duty for a period over 16 years a major penalty like dismissal ought to have been imposed but for his superannuation on 31.03.2001. He is not entitled for any pensionary benefits as his total service is less than 10 years. In the event of his claiming pensionary benefits in future on the ground of his having put in a requisite length of service qualifying for pensionary benefits prior to his unauthorized absence from 25.01.1985 it should not be enertained.

4. Hence it is considered expedient to pass a specific order restraining consideration of claim for pensionary benefits in future as an abundant caution.

**GOVERNMENT ORDER NO. HFW 152 MMC 2004, BANGALORE, DATED 5TH AUGUST 2005**

5. Government of Karnataka restrains the Accountant General(A & E)(Accounts)(Audit) from entertaining accepting and processing the pensionary papers of Dr. H.C. Veerendra, the then assistant Professor of Pathology, Bangalore Medical College who remained unauthorized by absent from duty from 25.01.1985 to 31.03.2001 which has been treated as 'dies-non' in the event of his claiming pensionary benefits in future.

By Order and in the Name of the Governor of Karnataka,
**S. NAGARAJU**
Under Secretary to Government,
Health & Family Welfare Department (Medical Education).

P.R. 1328

**REVENUE SECRETARIAT**

**Subject:** Payment of compensation to farmers whose standing crops are destroyed in the flood affected areas.

**Read:** MHA letter No.32-22/2004-NDM I dated 10th September, 2004, 23rd November 2004 and 15th June, 2005.

**PREAMBLE:**

Due to heavy rainfall and release of excess water from upstream reservoirs into Krishna and Bhima rivers the floods have caused excessive damage to the Agriculture and Horticulture crops in the state. Preliminary estimate shows that crops have been damaged in about 2 lakh hectares. Sugar cane, soybean, sunflower, maize, are the main crops lost.

CRF/NCCF guideliness on the crop compensation are as follows:

| | | |
|---|---|---|
| | Agriculture input subsidy where crop loss was 50% and above | |
| I. | For agriculture crops, horticulture crops and annual plantation crops | Rainfed areas Rs.1000/- Per hectare Rs.2500/- Per hectare in area with assured irrigation |
| II. | Input Subsidy to farmers other than small and marginal farmers, In case of severe calamity, subsidy will be payable at appropriate rate per hectare upto 2 hectares only, irrespective of the size of holdings. | 1. Rainfed areas: @ Rs.1000/- Per hectare<br>2. Irrigated areas: @ Rs.2500/- Per hectare<br>3. Perennial crops @ Rs.4000/- Per hectare. |
| III. | Perennial crops. | Rs.4,000/- Per hectare |

The compensation offered under CRF/NCCF guidelines as shown above is too meager. To redress the sufferings of the farmers to the extent possible Hon'able C.M. has announced that the compensation would be doubled. The difference would be paid out of the State resources.

Most of the crops loss is along the banks of Krishna and Bhima Rivers. More than 80,000 hectares of sugar cane is damaged. Since exact crop wise damage details are yet to be made available, the compensation to be paid is estimated based on irrigated crops rate in the CRF/NCCF guidelines which is Rs.2500/- per hectare.

The special sanction as a single time measure to provide crop compensation to the flood affected farmers on par with the CRF norms stated above would cost Rs.50 crores to the state's exchequer. The Chief Minister has already announced this special grant and the Empowered Committee has approved the same in anticipation of ratification by the Cabinet. The Finance Department in compliance to these decisions has already released Rs.50 crores from the State's budget.

Combining the CRF grants with the special grant of the state government for crop compensation the resultant rates for different types of crops. Hence the following order.

**GOVERNMENT ORDER No. RD 518 TNR 2005, Bangalore, Dated: 24th August 2005**

Government are pleased to order for payment of compensation to farmers in the flood affected areas whose standing crops are destroyed in the floods at the following rates for the different crops loss.

| | | |
|---|---|---|
| | Agriculture input subsidy where crop loss was 50% and above | |
| I. | For agriculture crops, horticulture crops and annual plantation crops | Rainfed areas Rs.2000/- Per hectare Rs.5000/- Per hectare in area with assured irrigation |
| II. | Input Subsidy to farmers other than small and marginal farmers, In case of severe calamity, subsidy will be payable at appropriate rate per hectare upto 2 hectares only, irrespective of the size of holdings. | 1. Rainfed areas: @ Rs.2000/- Per hectare<br>2. Irrigated areas: @ Rs.5000/- Per hectare<br>3. Perennial crops @ Rs.8000/- Per hectare |
| III. | Perennial crops. | Rs.8,000/- Per hectare |

This is a special sanction as a single time measure to provide crop compensation to the flood affected farmers. This shall not create a precedent.

By Order and in the Name of the Governor of Karnataka,

**M.S. DESAI**

P.R. 1244

Under Secretary to Government,
Revenue Department, (Relief & Services-2).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀಮತಿ ಬಿ.ಬಿ. ಲಲಿತಾ, ದ್ವಿ.ದ.ಸ. ರವರ ಪರಿವೀಕ್ಷಣಾ ಅವಧಿ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:** ಮಹಾ ನಿರೀಕ್ಷಕರು ಮತ್ತು ಅರಕ್ಷಕ ಮಹಾ ನಿರ್ದೇಶಕರ ಪತ್ರದ ಸಂಖ್ಯೆ: ಸಿಬ್ಬಂದಿ-6/40/2004-05, ದಿನಾಂಕ: 24.01.2005, 26.02.2005 ಹಾಗೂ 30.04.2005.

**ಪ್ರಸ್ತಾವನೆ:**

ಶ್ರೀಮತಿ ಬಿ.ಬಿ. ಲಲಿತಾ, ದ್ವಿತೀಯ ದರ್ಜೆ ಸಹಾಯಕರು ಡಿ.ಪಿ.ಓ., ಕೊಡಗು ರವರು ಅನುಕಂಪದ ಆಧಾರದ ಮೇಲೆ ದಿನಾಂಕ: 05.12.1994 ರಂದು 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ಆ ಹುದ್ದೆಗೆ ನಿಗದಿಪಡಿಸಿದ ನಿಗದಿತ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಲೋಯರ್ ಪೊಲೀಸ್ ಮ್ಯಾನುಯಲ್ ಮತ್ತು ಕನ್ನಡ ಭಾಷಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ನಿಬಂಧನೆ ಮೇರೆಗೆ ನೇಮಕ ಮಾಡಿಕೊಳ್ಳಲಾಗಿರುತ್ತದೆ. ಅವರು ಎಸ್.ಎಸ್.ಎಲ್.ಸಿ. ಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ತೆಗೆದುಕೊಂಡು ಉತ್ತೀರ್ಣರಾಗಿದ್ದರಿಂದ ಕನ್ನಡ ಭಾಷಾ ಪರೀಕ್ಷೆಯನ್ನು ತೆಗೆದುಕೊಳ್ಳುವುದರಿಂದ ವಿನಾಯಿತಿ ಪಡೆದಿರುತ್ತಾರೆ. ಆದರೆ ಈ 2 ವರ್ಷಗಳ ಪರಿವೀಕ್ಷಣಾ ಅವಧಿಯಲ್ಲಿ ನಿಗದಿ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದೆ ಇದ್ದುದ್ದರಿಂದ ಅವರ ಪರಿವೀಕ್ಷಣಾ ಅವಧಿಯನ್ನು ಕ.ನಾ.ಸೇ. (ಪರಿವೀಕ್ಷಣಾ) ನಿಯಮಗಳು 1997ರ ನಿಯಮ 4(1)(2) ಪ್ರಕಾರ ದಿನಾಂಕ: 05.12.1996 ರಿಂದ 04.12.1997 ರವರೆಗೆ ವಿಸ್ತರಿಸಲಾಗಿತ್ತು ಸದರಿಯವರು 98ನೇ ಮೊದಲನೇ ಅಧಿವೇಶನದಲ್ಲಿ ಅಕೌಂಟ್ಸ್ ಹೈಯರ್ ಹಾಗೂ 2004ರ ಮೊದಲನೇ ಅಧಿವೇಶನದಲ್ಲಿ ದಿನಾಂಕ: 04.07.2004 ರಂದು ಪೊಲೀಸ್ ಮ್ಯಾನುಯಲ್ ಪರೀಕ್ಷೆಗೆ ಹಾಜರಾಗಿ ಉತ್ತೀರ್ಣರಾಗಿರುತ್ತಾರೆ. ಅವರ ಸೇವೆ ತೃಪ್ತಿಕರವಾಗಿರುವುದರಿಂದ ಹಾಗೂ ಅವರಿಗೆ ವಯಸ್ಸಾಗಿದ್ದು 3 ಚಿಕ್ಕ ಮಕ್ಕಳಿರುವುದರಿಂದ ಮಾನವೀಯ ದೃಷ್ಟಿಯಿಂದ ಅವರನ್ನು ಸೇವೆಯಲ್ಲಿ ಮುಂದುವರೆಸಿ ಇಲಾಖಾ ಪರೀಕ್ಷೆಗಳನ್ನು ನೀಡಲಾಗಿರುತ್ತದೆ. ಆದ್ದರಿಂದ ಪ್ರಸ್ತಾವನೆಯ ವಿಳಂಬವನ್ನು ಹಾಗೂ ಸೇವಾ ವಿಸ್ತರಣೆಯ ಅನುಮತಿಯನ್ನು ಅಂಗೀಕರಿಸಿ ಅವರ ಖಾಯಂಪೂರ್ವ ಅವಧಿಯನ್ನು ಕ.ನಾ.ಸೇ. ಪರಿವೀಕ್ಷಣಾ ನಿಯಮಗಳು 1977ರ ನಿಯಮ 4(1)(1) ಪ್ರಕಾರ ದಿನಾಂಕ: 05.12.1997 ರಿಂದ 04.07.2004 (ಅಂತಿಮವಾಗಿ ಇಲಾಖಾ ಪರೀಕ್ಷೆಗೆ ಹಾಜರಾದ ದಿನಾಂಕ) ರವರೆಗೆ ಪರಿವೀಕ್ಷಣಾ ಅವಧಿ ವಿಸ್ತರಿಸುವಂತೆ ಕೋರಿ ಮಹಾ ನಿರೀಕ್ಷಕರು ಮತ್ತು ಅರಕ್ಷಕ ಮಹಾ ನಿರ್ದೇಶಕರವರು ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಒಇ 6 ಪೊಸಿಲಿ 2005, ಬೆಂಗಳೂರು, ದಿನಾಂಕ: 26ನೇ ಜುಲೈ 2005**

ಶ್ರೀಮತಿ ಬಿ.ಬಿ. ಲಲಿತ, ದ್ವಿತೀಯ ದರ್ಜೆ ಸಹಾಯಕ ಇವರ ಖಾಯಂ ಪೂರ್ವ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಗಳು, 1977ರ ನಿಯಮ 4(1)(1) ರನ್ವಯ ದಿನಾಂಕ: 05.12 1997 ರಿಂದ 04.07.2004 ರವರೆಗೆ ವಿಸ್ತರಿಸಿದೆ.

ಈ ಆದೇಶವನ್ನು ಅಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಒಸಾಇ 28997 ಅಂಅಸ 2005 ರಲ್ಲಿ ದಿನಾಂಕ: 3.6.2005 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಕೆ. ಗುಂಡೂರಾವ್**

ಪಿ.ಆರ್. 1125 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್. ದೇವಯ್ಯ, ನಿವೃತ್ತ ಕಛೇರಿ ಸಹಾಯಕರು, ಜಿಲ್ಲಾಧಿಕಾರಿಗಳ ಕಛೇರಿ, ಚಾಮರಾಜನಗರ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 105 ಎಸ್‌ಇಎನ್ 2005, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2005**

ಶ್ರೀ ಎಸ್. ದೇವಯ್ಯ, ನಿವೃತ್ತ ಕಛೇರಿ ಸಹಾಯಕರು, ಚಾಮರಾಜನಗರ ಜಿಲ್ಲಾಧಿಕಾರಿಗಳ ಕಛೇರಿ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಜಿಲ್ಲೆಯ ಕಂದಾಯ ಘಟಕದಲ್ಲಿ ಯಾವುದೆ ನೇಮಕಾತಿ ಮಾಡದಿದ್ದರೂ ಹಾಗೂ ಬ್ಯಾಕ್‌ಲಾಗ್ ಹುದ್ದೆಗಳು ಸೃಷ್ಟಿಯಾಗದಿದ್ದರೂ ಕೂಡ (ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳಿಗೆ ಮೀಸಲಿರಿಸಿ ಭರ್ತಿ ಮಾಡದ ಖಾಲಿ ಹುದ್ದೆಗಳ ವಿಶೇಷ ನೇಮಕಾತಿ) ನಿಯಮ 2001ರ 5(2) ರನ್ವಯ ಹುದ್ದೆಗಳನ್ನು ಭರ್ತಿ ಮಾಡಲು ಅಧಿಸೂಚನೆ ಹೊರಡಿಸುವ ಬಗ್ಗೆ ಜಿಲ್ಲಾಧಿಕಾರಿಗಳಿಗೆ ಶಿಫಾರಸ್ಸು ಮಾಡಿ ಅಕ್ರಮವಾಗಿ ಅಧಿಸೂಚನೆ ಹೊರಡಿಸಿ ಅನರ್ಹ ಅಭ್ಯರ್ಥಿಗಳನ್ನು ನೇಮಕ ಮಾಡಿಕೊಳ್ಳಲು ಕಾರಣರಾದ ಆರೋಪಕ್ಕೆ ಕಾರಣರಾಗಿ ತೀವ್ರ ದುರ್ನಡತೆ ಎಸಗಿರುವುದು ಕಂಡು ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಸ್. ದೇವಯ್ಯ, ನಿವೃತ್ತ ಕಛೇರಿ ಸಹಾಯಕರು ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಬೇಕೆಂದು ಸರ್ಕಾರವು ಭಾವಿಸಿರುವುದರಿಂದಲೂ,

ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ 214ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ದೇವಯ್ಯ, ಅವರ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ವಿಚಾರಣೆಯಲ್ಲಿ ಸರ್ಕಾರವು ಶಿಸ್ತು ಪ್ರಾಧಿಕಾರಿಯಾಗಿ ಕಾರ್ಯ ನಿರ್ವಹಿಸತಕ್ಕದ್ದು ಹಾಗೂ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11, 11-ಎ ರಲ್ಲಿ ನಿಗದಿಪಡಿಸಿರುವ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1164 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಬಿ. ರುದ್ರಪ್ಪ ಸಹಾಯಕ ವ್ಯವಸ್ಥಾಪಕರು (ಮಾರುಕಟ್ಟೆ) ಇವರ ನಿಯೋಜನೆ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ:** ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ ಇವರ ಪತ್ರ ಸಂಖ್ಯೆ: ಮಮಅನಿ:ಸಿಬ್ಬಂದಿ:ವೈ.ಕ.:34:2004-05:4842, ದಿನಾಂಕ: 2.3.2005.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 287 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2005**

ಶ್ರೀ ಬಿ. ರುದ್ರಪ್ಪ, ಸಹಾಯಕ ವ್ಯವಸ್ಥಾಪಕರು, (ಮಾರುಕಟ್ಟೆ) ಇವರನ್ನು ಕರ್ನಾಟಕ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮಕ್ಕೆ ನಿಯೋಜಿಸಲು ನಿಬಂಧನೆ ಷರತ್ತು ಮತ್ತು ನಿಬಂಧನೆಗಳನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

1) **ನಿಯೋಜನೆಯ ಅವಧಿ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭಿಕ ಅವಧಿಯು ದಿನಾಂಕ: 17.12.2004 ರಿಂದ 3 ವರ್ಷದವರೆಗೆ ಅಥವಾ ಮುಂದಿನ ಆದೇಶ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಜಾರಿಯಲ್ಲಿರುತ್ತದೆ.

2) **ಅನ್ಯಸೇವೆಯ ಮೇಲಿನ ನಿಯೋಜನೆಯ ಪ್ರಾರಂಭ ಮತ್ತು ಮುಕ್ತಾಯದ ಅವಧಿ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯು ಅಧಿಕಾರಿಯವರ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ ಪ್ರಾರಂಭವಾಗುವುದು ಮತ್ತು ನಿಯೋಜನಾವಧಿ ಅಂತ್ಯಗೊಂಡು ನೇಮಕ ಮಾಡಿದ ಹುದ್ದೆಯ ಕಾರ್ಯಭಾರ ವಹಿಸಿಕೊಟ್ಟ ದಿನಾಂಕದಿಂದ ಮುಕ್ತಾಯಗೊಳ್ಳುವುದು.

3) **ವೇತನ:**

ಅನ್ಯಸೇವೆಯ ಮೇಲಿನ ನಿಯೋಜನೆಯ ಅವಧಿಯಲ್ಲಿ ಇವರು ಮಾತೃ ಇಲಾಖೆಯಲ್ಲಿ ಹೊಂದಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ವೇತನವನ್ನು ಪಡೆಯುತ್ತಾರೆ. ಮತ್ತು 200 ರೂ.ಗಳ ಗರಿಷ್ಠ ಮಿತಿಗೊಳಪಟ್ಟು, ಆ ವೇತನ ಶ್ರೇಣಿಯ ಸರಾಸರಿಯ ಶೇ.5ರ ದರದಲ್ಲಿ ಅನ್ಯಸೇವಾ ಭತ್ಯೆಯನ್ನು (ಎಫ್.ಎಸ್.ಎ) ಸಹ ಪಡೆಯುತ್ತಾರೆ.

4) **ತುಟ್ಟಿಭತ್ಯೆ:**

ಮನೆ ಬಾಡಿಗೆ ಭತ್ಯೆ: ನಗರ ಪರಿಹಾರ ಭತ್ಯೆ ಪಾವತಿಯು ರಾಜ್ಯ ಸರ್ಕಾರದ ನಿಯಮಗಳಡಿಯಲ್ಲಿ ನಿಬಂಧಿಸಲಾಗುವುದು.

**5) ಸೇರುವ ಕಾಲ:**

ಸೇರುವ ಕಾಲದ ವೇತನ ಮತ್ತು ವರ್ಗಾವಣೆ ಪ್ರಯಾಣ ಭತ್ಯೆ ಇವುಗಳನ್ನು ನಿಯೋಜನೆ ಮೇಲೆ ಹೋಗುವಾಗ ಮತ್ತು ಅಲ್ಲಿಂದ ಹಿಂದಿರುಗುವಾಗ ರಾಜ್ಯ ಸರ್ಕಾರ ನಿಯಮಗಳ ಆದೇಶಗಳಡಿಯಲ್ಲಿ ಕ್ರಮಗೊಳಿಸಲಾಗುವುದು ಮತ್ತು ಇವುಗಳನ್ನು ನಿಯೋಜಕರು ಪಾವತಿ ಮಾಡತಕ್ಕದ್ದು.

**6) ಪ್ರಯಾಣ ಭತ್ಯೆ:**

ನಿಯೋಜನೆ ಮೇಲೆ ಅನ್ಯಸೇವೆಗೆ ಸೇರಿದ ನಂತರ ಕೈಗೊಂಡ ಪ್ರಯಾಣಗಳಿಗೆ ಪ್ರಯಾಣ ಭತ್ಯೆ ಮತ್ತು ದಿನಭತ್ಯೆಯನ್ನು ನಿಯೋಜಕರಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಪಡೆಯಲು ಅಧಿಕಾರಿ ಅರ್ಹರಾಗಿರುತ್ತಾರೆ.

**7) ರಜೆ ನಿಯಮಗಳು:**

ರಾಜ್ಯ ಸರ್ಕಾರದಲ್ಲಿ ಅಧಿಕಾರಿಗೆ ಅನ್ವಯವಾಗುವ ರಜಾ ನಿಯಮಗಳಿಗೆ ಒಳಪಟ್ಟಿರುತ್ತಾರೆ.

**8) ರಜೆ ಪ್ರಯಾಣ ರಿಯಾಯಿತಿ:**

ರಾಜ್ಯ ಸರ್ಕಾರದಲ್ಲಿನ ಸಂಬಂಧಿತ ನಿಯಮಗಳ ಪ್ರಕಾರ ಸ್ವಗ್ರಾಮ ಪ್ರಯಾಣಕ್ಕೆ ರಜೆ ಪ್ರಯಾಣ ರಿಯಾಯಿತಿಯನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ.

**9) ಗಳಿಕೆ ರಜೆ ನಗದೀಕರಣ:**

ಕರ್ನಾಟಕ ನಾಗರೀಕರ ಸೇವಾ ನಿಯಮಗಳ 'ಸಿ' ಅನುಬಂಧದಲ್ಲಿರುವ ನಿಯಮಗಳ ಪ್ರಕಾರ ಗಳಿಕೆ ರಜೆ ನಗದೀಕರಣ ಸೌಲಭ್ಯಕ್ಕೆ ಅಧಿಕಾರಿ ಅರ್ಹರಾಗಿರುತ್ತಾರೆ.

**10) ವೈದ್ಯಕೀಯ ರಿಯಾಯಿತಿಗಳು:**

1963ರ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಉಪಚಾರ) ನಿಯಮಗಳಲ್ಲಿ ಲಭ್ಯವಿರುವ ವೈದ್ಯಕೀಯ ಸೌಲಭ್ಯಗಳಿಗೆ ಕಡಿಮೆಯಿಲ್ಲದಂತೆ ಸೌಲಭ್ಯಗಳನ್ನು ಪಡೆಯಲು ಅಧಿಕಾರಿಯು ಅರ್ಹರಾಗಿರುತ್ತಾರೆ ಮತ್ತು ಅದರ ಬಾಬ್ತಿನ ವೆಚ್ಚವನ್ನು ನಿಯೋಜಕರೇ ಭರಿಸತಕ್ಕದ್ದು.

**11) ದುರ್ಬಲತೆ ರಜೆ:**

ನಿಯೋಜಕರ ಬಳಿ ಸೇವೆಯಲ್ಲಿರುವಾಗ ಅಥವಾ ಸೇವೆಯ ಮೂಲಕ ಸಂಬಂಧಿಸುವ ದುರ್ಬಲತೆಗೆ ಸಂಬಂಧಿಸಿದಂತೆ ಮಂಜೂರಾದ ದುರ್ಬಲತೆ ರಜೆಗೆ ಇಂತಹ ದುರ್ಬಲತೆಯು ನಿಯೋಜಕರ ಬಳಿಯಲ್ಲಿನ ಸೇವೆಯು ಕೊನೆಗೊಂಡ ನಂತರ ಕಂಡುಬಂದರೂ ಸಂಬಂಧಿಸಿದ ರಜೆ ವೇತನವನ್ನು ಪಾವತಿ ಮಾಡಲು ಅನ್ಯನಿಯೋಜಕರು ಬದ್ಧರಾಗಿರುತ್ತಾರೆ.

**12) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನ:**

(ಅ) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನವನ್ನು ನಿಯೋಜಕರು ಈ ಮುಂದಿನ ದರಗಳಲ್ಲಿ ಪಾವತಿ ಮಾಡತಕ್ಕದ್ದು.

| | |
|---|---|
| (1) ರಜೆ ವೇತನ ಅಂಶದಾನ : | ಅನ್ಯಸೇವೆಯ ಅವಧಿಯಲ್ಲಿ ಅನ್ಯಸೇವಾ ಭತ್ಯೆಯೂ ಸೇರಿದಂತೆ, ಪಡೆಯುವ ಸಂಬಳದ ಶೇ.11 ರಷ್ಟು. |
| (2) ನಿವೃತ್ತಿ ವೇತನ ಅಂಶದಾನ: | ಕಾಲ ಕಾಲಕ್ಕೆ ಪಡೆಯುವ ವೇತನದ 8ನೇ ಒಂದು ಭಾಗ ಉದ್ದೇಶಕ್ಕೆ ವೇತನ-ಎಂದರೆ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 37 ಎಸ್‌ಆರ್‌ಎಸ್ 87, ದಿನಾಂಕ: 11.2.88 ರಲ್ಲಿ ವಿವರಿಸಲಾದ ವೇತನ ಎಂದರ್ಥ. |

ಆ) ನಿಯೋಜಕರು ವಾರ್ಷಿಕವಾಗಿ ಪ್ರತಿ ಆರ್ಥಿಕ ವರ್ಷ ಕೊನೆಗೊಂಡ 15 ದಿನಗಳೊಳಗೆ ಅಥವಾ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಅನ್ಯಸೇವೆಯು ಮುಗಿದು ಹೋದಂದಿನಿಂದ ರಜೆಯ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪ್ರತ್ಯೇಕವಾಗಿ ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಸಂದಾಯ ಮಾಡತಕ್ಕದ್ದು.

| | | |
|---|---|---|
| ಅ) ರಜೆ ವೇತನ | 1) ಅಖಿಲ ಭಾರತ ಸೇವೆಯ ಅಧಿಕಾರಿಗಳ ಪ್ರಕರಣದಲ್ಲಿ | 0070 ಇತರೆ ಆಡಳಿತ ಸೇವೆಗಳು 800-ಇತರೆ ಜಮೆಗಳು 13 ಅಖಿಲ ಭಾರತ ಸೇವೆಯ ಅಧಿಕಾರಿಗಳಿಗೆ ಸಂಬಂಧಿಸಿದ ರಜೆ ವೇತನ ಅಂಶದಾನ |
| | 2) ಇತರ ಪ್ರಕರಣದಲ್ಲಿ | |
| ಎ) ಕೃತ್ಯ ಸಂಬಂಧದ ಜಮೆ ಶೀರ್ಷಿಕೆ ಇದ್ದಲ್ಲಿ | | ಸಿಬ್ಬಂದಿಗೆ ಅನ್ವಯಿಸುವ ವೆಚ್ಚ ಶೀರ್ಷಿಕೆಗೆ ಅನುಗುಣವಾದ ಕೃತ್ಯ ಸಂಬಂಧದ ಶೀರ್ಷಿಕೆ 800 ಇತರೆ ಜಮೆಗಳು - ರಜೆ ವೇತನದ ಅಂಶದಾನ |
| ಬಿ) ಸರಿಹೊಂದುವ ಜಮೆ ಶೀರ್ಷಿಕೆ ಇಲ್ಲದೇ ಹೋದಲ್ಲಿ | | |
| 1) ಸಾಮಾನ್ಯ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | | 0075 ಇತರೆ ಸಾಮಾನ್ಯ ಸೇವೆಗಳು 800 ಇತರೆ ಜಮೆಗಳು-ರಜೆ ವೇತನ ಅಂಶದಾನ |
| 2) ಸಾಮಾನ್ಯ ಮತ್ತು ಸಾಮುದಾಯಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | | 0250 ಇತರೆ ಸಾಮಾಜಿಕ ಸೇವೆಗಳು-800 ಇತರೆ ಜಮೆಗಳು ರಜೆ ವೇತನ ಅಂಶದಾನ |
| 3) ಆರ್ಥಿಕ ಸೇವೆಗಳು ಇದರಡಿಯಲ್ಲಿ ಬರುವ ಇಲಾಖೆಗಳ ಪ್ರಕರಣದಲ್ಲಿ | | 1475 ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-800 ಇತರೆ ಜಮೆಗಳು ರಜೆ ವೇತನದ ಅಂಶದಾನ. |
| ಸಿ) ನಿವೃತ್ತಿ ವೇತನ ಅಂಶದಾನ | | 0071 ನಿವೃತ್ತಿ ವೇತನ ಮತ್ತು ಇತರ ನಿವೃತ್ತಿ ಸೌಲಭ್ಯಗಳ ಅಂಶದಾನ ಮತ್ತು ವಸೂಲಿಗಳು 101. ಚಂದಾಗಳು ಮತ್ತು ಅಂಶದಾನಗಳು-03. ನಿವೃತ್ತಿ ವೇತನ ವೆಚ್ಚದ ಬಗ್ಗೆ ವಾಣಿಜ್ಯ ಇಲಾಖೆಗಳಿಂದ ವಸೂಲು ಮಾಡಲಾದ ಅಂಶದಾನ ಅಥವಾ 06 ನಿವೃತ್ತ ವೇತನದ ವೆಚ್ಚದ ಸಲುವಾಗಿ ಸ್ಥಳೀಯ ಸಂಸ್ಥೆಗಳಿಂದ ವಸೂಲು ಮಾಡಿದ ಅಂಶದಾನ. |

(ಡಿ) ಮೇಲಿನ ಅವಧಿಯೊಳಗೆ ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳನ್ನು ಪಾವತಿ ಮಾಡದಿದ್ದರೆ, ಸರ್ಕಾರ ವಿಶೇಷವಾಗಿ ವಿನಾಯಿತಿ ತೋರಿಸಿದ ಹೊರತು, ಪಾವತಿ ಮಾಡದಿರುವ ಅಂಶದಾನದ ಮೇಲೆ, ಮೇಲಿನ ಅವಧಿಯು ಮುಕ್ತಾಯಗೊಂಡ ದಿನಾಂಕದಿಂದ ಅಂಶದಾನವನ್ನು ಅಂತಿಮವಾಗಿ ಪಾವತಿ ಮಾಡುವ ದಿನಾಂಕದವರೆಗೆ ಪ್ರತಿ 100 ರೂ.ಗಳಿಗೆ ದಿನಂಪ್ರತಿ 2 ಪೈಸೆ ದರದಲ್ಲಿ ಬಡ್ಡಿಯನ್ನು ನಿಯೋಜಕರು ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು.

(ಈ) ರಜೆ ವೇತನ ಮತ್ತು ನಿವೃತ್ತಿ ವೇತನ ವಂತಿಕೆಗಳನ್ನು ಕರ್ನಾಟಕ ರಾಜ್ಯ ಮಹಿಳಾ ಆಯೋಗ, ಬೆಂಗಳೂರು-ಇವರಿಂದ ಮಹಾಲೇಖಪಾಲರು (ಎ ಅಂಡ್ ಇ) ಕರ್ನಾಟಕ, ಬೆಂಗಳೂರು, ಇವರಿಗೆ ತಪ್ಪದೇ ಕ್ರಾಸ್ ಮಾಡಿದ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿ ಮಾಡತಕ್ಕದ್ದು. ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದು ಮತ್ತು ಅದನ್ನು ನಗದು ರೂಪದಲ್ಲಿ ಸಂದಾಯ ಮಾಡತಕ್ಕದ್ದಲ್ಲ. ಅಂತಹ ನಗದು ರೂಪದಲ್ಲಿ ಸಂದಾಯ ಚೆಕ್: ಡಿಮ್ಯಾಂಡ್ ಡ್ರಾಫ್ಟ್ ಮಹಾಲೇಖಪಾಲರ ಕಛೇರಿಯಲ್ಲಿ ಸ್ವೀಕೃತವಾದ ದಿನಾಂಕವನ್ನು ವಂತಿಕೆಯ ಹೊಣೆಯಿಂದ ವಿಮುಕ್ತಿಪಡೆದ ದಿನಾಂಕವೆಂದು ಪರಿಗಣಿಸತಕ್ಕದಾದ್ದರಿಂದ, ಚೆಕ್ : ಡಿಮ್ಯಾಂಡ್ ಡ್ರಾಫ್ಟ್‌ನ್ನು ನಿಗದಿಪಡಿಸಿದ ದಿನಾಂಕದೊಳಗಾಗಿ ಮಹಾಲೇಖಪಾಲರ ಕಛೇರಿ (ಎ ಅಂಡ್ ಇ) ಕರ್ನಾಟಕ, ಬೆಂಗಳೂರು ಇವರಿಗೆ ತಲುಪುವಂತೆ ಕಳುಹಿಸತಕ್ಕದ್ದು.

(ಎಫ್) ರಜೆ ವೇತನ ಮತ್ತು ನಿವೃತ್ತಿ ವೇತನ ಅಂಶದಾನಗಳ ವಂತಿಕೆ ಮತ್ತು ಅವುಗಳ ಮೇಲೆ ಬಡ್ಡಿಯಿದ್ದರೆ, ಅಂತಹ ಬಡ್ಡಿಗಳನ್ನು ಅತ್ಯಂತ ದತ್ತಿದರ ರೂಪಾಯಿಗೆ ಸರಿಹೊಂದಿಸತಕ್ಕದ್ದು.

**13) ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆ:**

ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಗೆ ಸಂಬಂಧಿಸಿದ ಮಾಸಿಕ ವಂತಿಕೆಯನ್ನು ಅಧಿಕಾರಿಯವರ ವೇತನದಿಂದ ವಸೂಲು ಮಾಡಲು ಮತ್ತು ಅದನ್ನು 1981ರ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಾಮೂಹಿಕ ವಿಮಾ ಯೋಜನೆಯ ಅನುಬಂಧ-ಎ ದಲ್ಲಿನ ಅನುಸೂಚಿಯೊಂದಿಗೆ ಇಲಾಖಾ ಮುಖ್ಯಸ್ಥರ ಹೆಸರಿಗೆ ಕ್ರಾಸ್ ಮಾಡಿದ ಚೆಕ್ : ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಸಂಬಂಧಿತ ಲೆಕ್ಕ ಶೀರ್ಷಿಕೆಗೆ ಜಮಾ ಮಾಡಲು ಕಳುಹಿಸತಕ್ಕದ್ದು.

**14) ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯ ವಿಮಾ ಪತ್ರ:**

ಸಾಮಾನ್ಯ ಭವಿಷ್ಯ ನಿಧಿಗೆ ಚಂದಾ ಅನ್ಯಸೇವೆಯ ಮೇಲೆ ಪ್ರತಿ ನಿಯೋಜನೆ ಹೋಗುವ ಸಮಯದಲ್ಲಿ ಕೆ.ಜಿ.ಐ.ಡಿ. ನಿಯಮಾವಳಿ : ಜಿ.ಪಿ.ಎಫ್. ನಿಯಮಾವಳಿ ಪ್ರಕಾರ ಚಂದಾ ನೀಡುತ್ತಿದ್ದ ಕೆ.ಜಿ.ಐ.ಡಿ. : ಜಿ.ಪಿ.ಎಫ್. ನಲ್ಲಿನ ವಿಮಾ ಪತ್ರಗಳಿಗೆ ಚಂದಾ ನೀಡುವುದನ್ನು ಅಧಿಕಾರಿ ಮುಂದುವರೆಸುತ್ತಾರೆ. ಅಧಿಕಾರಿಯವರ ಸಂಬಳದಿಂದ ಚಂದಾಗಳನ್ನು ವಸೂಲು ಮಾಡತಕ್ಕದ್ದು ಮತ್ತು ಈ ಮುಂದಿನ ಲೆಕ್ಕ ಶೀರ್ಷಿಕೆಗಳಿಗೆ ಜಮಾ ಮಾಡತಕ್ಕದ್ದು.

| | | |
|---|---|---|
| ಸಾಮಾನ್ಯ ಭವಿಷ್ಯ ನಿಧಿ | : | 8005.ರಾಜ್ಯ ಭವಿಷ್ಯ ನಿಧಿ |
| ಕರ್ನಾಟಕ ಸರ್ಕಾರಿ ವಿಮಾ ಇಲಾಖೆ | : | 8011 ವಿಮೆ ಮತ್ತು ನಿವೃತ್ತಿ ವೇತನ ನಿಧಿಗಳು-1 ಜಮೆ ನಿಧಿಗಳು. |

**15) ಬೋನಸ್ ಅಥವಾ ಅನುಗ್ರಹ ಕೊಡುಗೆ ಪಾವತಿ:**

ಸರ್ಕಾರಿ ಕಂಪನಿ, ಮಂಡಳಿ, ನಿಗಮ ಇತ್ಯಾದಿಗಳಿಗೆ ನಿಯೋಜಕರಾಗಿ ಮಾಸಿಕ ಎರಡು ಸಾವಿರದ ಐದುನೂರು ರೂಪಾಯಿಗಳಿಗೆ ಮೀರದೆ ಸಂಬಳವನ್ನು ಪಡೆಯುತ್ತಿರುವ ಅಧಿಕಾರಿಗೆ ಉದ್ದಿಮೆಯು 1965ರ ಬೋನಸ್ ಸಂದಾಯ ಅಧಿನಿಯಮಗಳ ಪ್ರಕಾರ ಅನುಗ್ರಹ ಕೊಡುಗೆ ನೀಡಿದಲ್ಲಿ ಬೋನಸ್ ಅಥವಾ ಅನುಗ್ರಹ ಕೊಡುಗೆಯನ್ನು ಪಡೆಯಲು ಅನುಮತಿಸತಕ್ಕದ್ದು.

**16) ಬಡ್ತಿ ಅಥವಾ ವರ್ಗಾವಣೆ ಅಥವಾ ಪ್ರಭಾರ:**

ಅಧಿಕಾರಿಯವರಿಗೆ ಬಡ್ತಿ ನೀಡುವುದು ಅಥವಾ ವರ್ಗಾವಣೆ ಮಾಡುವುದು ಅಥವಾ ಹೆಚ್ಚುವರಿ ಕಾರ್ಯಭಾರವನ್ನು ವಹಿಸುವುದು ಅಥವಾ ಹೆಚ್ಚುವರಿ ಸಂಭಾವನೆಯನ್ನು ನೀಡುವುದು ಅಥವಾ ಸೌಲಭ್ಯವನ್ನು ಒದಗಿಸುವುದು ಇವುಗಳನ್ನು ಸರ್ಕಾರದ ಪೂರ್ವಾನುಮತಿ ಪಡೆಯದೆ ಮಾಡತಕ್ಕದ್ದಲ್ಲ.

**17) ಗೃಹ ನಿರ್ಮಾಣ ಮುಂಗಡ : ಗೃಹ ಖರೀದಿ ಮುಂಗಡ : ಗೃಹ ರಿಪೇರಿ ಮುಂಗಡ ಮತ್ತು ವಾಹನ ಖರೀದಿ ಮುಂಗಡ:**

ನಿಯೋಜಕರು, ಪ್ರಸ್ತುತ, ಮುಂಗಡಗಳನ್ನು ಅಧಿಕಾರಿಯವರಿಗೆ ಮಂಜೂರು ಮಾಡತಕ್ಕದ್ದಲ್ಲ. ಈ ಮುಂಗಡಗಳ ಮಂಜೂರಾತಿಗಾಗಿ ಅಧಿಕಾರಿಯವರು ಆಡಳಿತಾತ್ಮಕ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಅರ್ಜಿ ಸಲ್ಲಿಸತಕ್ಕದ್ದು.

18) ದಿನಾಂಕ: 10.7.96 ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ರ ಸರ್ಕಾರಿ ಆದೇಶದನ್ವಯ ಆರ್ಥಿಕ ಇಲಾಖೆ ಸಹಮತಿಯನ್ನು ಪೂರ್ವಭಾವಿಸಿ ಈ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಪಿ.ಆರ್. 1200 ಸರ್ಕಾರದ ಅಧೀನ ಕಾರ್ಯದರ್ಶಿ-2, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಮೈಸೂರು ನಗರದ ಸುತ್ತಮುತ್ತಲಿನ ಜಮೀನು/ನಿವೇಶನಗಳ ಹಂಚಿಕೆಯಲ್ಲಿ ನಡೆದ ಅಕ್ರಮದಲ್ಲಿ ಭಾಗಿಗಳಾದ ಅಧಿಕಾರಿ/ನೌಕರರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ಪತ್ರದ ಕ್ರಮಾಂಕ:ಕಂಪ್ಲೆಂಟ್/ಲೋಕ್/ಎಮ್‌ವೈಎಸ್-14/95-96/ಡಿಆರ್‌ಇ-5/9 ದಿನಾಂಕ 13.3.2001.

**ಪ್ರಸ್ತಾವನೆ:**

ಕರ್ನಾಟಕ ಲೋಕಾಯುಕ್ತ ಕಾಯ್ದೆ 1984ರ ಕಲಂ 12(3)ರನ್ವಯ ಸನ್ಮಾನ್ಯ ಲೋಕಾಯುಕ್ತರು ಮೇಲೆ ಓದಲಾದ ದಿನಾಂಕ 13.3.2001ರ ತಮ್ಮ ವರದಿ ಸಲ್ಲಿಸಿ, 1987-93ರ ಅವಧಿಯಲ್ಲಿ ಮೈಸೂರು ತಾಲ್ಲೂಕಿನ ಕಸಬಾ ಹೋಬಳಿ ವ್ಯಾಪ್ತಿಯಲ್ಲಿ ಬರುವ ಹಿನಕಲ್ ಮಂಡಲ ಪಂಚಾಯಿತಿಯಲ್ಲಿ 250 ಎಕರೆ, ಏರಗನಹಳ್ಳಿ ಮಂಡಲ ಪಂಚಾಯಿತಿಯಲ್ಲಿ 150 ಎಕರೆ, ಸಿದ್ದಲಿಂಗಪುರ ಮಂಡಲ ಪಂಚಾಯಿತಿಯಲ್ಲಿ 150 ಎಕರೆ ಹಾಗೂ ಉದ್ ಬೂರು (ಶ್ರೀರಾಮಪುರ) ಮಂಡಲ ಪಂಚಾಯಿತಿಯಲ್ಲಿ 100 ಎಕರೆ ಜಮೀನನ್ನು ಅಕ್ರಮ

ಹಾಗೂ ಕಾನೂನು ಬಾಹಿರವಾಗಿ ಪಂಚಾಯಿತಿ ಖಾತೆಗಳನ್ನು ಮಾಡಿ ಸರ್ಕಾರಕ್ಕೆ ರೂ.62,32,48,200/- ಗಳಷ್ಟು ನಷ್ಟ ಉಂಟು ಮಾಡಿರುವುದು ತಾವು ನಡೆಸಿದ ತನಿಖೆಯಿಂದ ದೃಢಪಟ್ಟಿದ್ದು, ಅದರಲ್ಲಿ ಭಾಗಿಗಳಾದ ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಅದೇ ಆರೋಪದ ಮೇರೆಗೆ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸುವಂತೆಯೂ, ಮೇಲ್ಕಂಡ ದುರ್ನಡತೆಯಿಂದಾಗಿ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಅವರುಗಳಿಂದ ವಸೂಲು ಮಾಡಲು ಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಿ ಸನ್ಮಾನ್ಯ ಲೋಕಾಯುಕ್ತರು 1984ರ ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ 12(3)ರಡಿ ವರದಿ ಮಾಡಿದ್ದಾರೆ.

1) ಶ್ರೀ ಎಸ್. ಬಸಪ್ಪ, ಹಿಂದಿನ ತಹಶೀಲ್ದಾರ್, ಹಾಲಿ ಕೆಎಎಸ್ ಅಧಿಕಾರಿ,
2) ಶ್ರೀ ಬಿ.ಎಸ್. ನಾರಾಯಣ ಸ್ವಾಮಿ, ಹಿಂದಿನ ತಹಶೀಲ್ದಾರ್, ಹಾಲಿ ನಿವೃತ್ತರು,
3) ಶ್ರೀ ಬಿ. ಬಸಪ್ಪ, ಶಿರಸ್ತೇದಾರ,
4) ಶ್ರೀ ಬಿ.ಟಿ. ಗೌಡ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
5) ಶ್ರೀ ವಿಶ್ವನಾಥ ಟೆಕ್ಕೂರು, ಮಂಡಲ ಪಂಚಾಯಿತಿ ಕಾರ್ಯದರ್ಶಿ,
6) ಶ್ರೀ ಬಿ. ರಾಮಕೃಷ್ಣೇಗೌಡ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
7) ಶ್ರೀ ಎಸ್.ಪುಟ್ಟಸ್ವಾಮಿಗೌಡ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
8) ಶ್ರೀ ಡಿ.ಎಂ. ಕೆಂಡಗಣ್ಣಯ್ಯ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
9) ಶ್ರೀ ಡಿ. ಮನು, ಬಿಲ್ ಕಲೆಕ್ಟರ್,
10) ಶ್ರೀ ಜೆ. ಬಸವರಾಜು, ಬಿಲ್ ಕಲೆಕ್ಟರ್,
11) ಶ್ರೀ ಶ್ರೀಕಂಠಮೂರ್ತಿ, ಬಿಲ್ ಕಲೆಕ್ಟರ್,
12) ಶ್ರೀ ಬೋರೇಗೌಡ, ಬಿಲ್ ಕಲೆಕ್ಟರ್,
13) ಶ್ರೀ ಎನ್.ಪಿ. ಸಿದ್ದೇಗೌಡ, ಬಿಲ್ ಕಲೆಕ್ಟರ್,
14) ಶ್ರೀ ಎಂ.ಆರ್. ರಂಗಸ್ವಾಮಿ, ಬಿಲ್ ಕಲೆಕ್ಟರ್,
15) ಶ್ರೀ ಬಿ.ವಿ. ಕೃಷ್ಣ ಮೂರ್ತಿ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
16) ಶ್ರೀ ಮಲ್ಲಿಕಾರ್ಜುನಯ್ಯ, ಮಂಡಲ ಪಂಚಾಯಿತಿ ಕಾರ್ಯದರ್ಶಿ.

ಮೇಲ್ಕಂಡ 16 ಮಂದಿ ಅಧಿಕಾರಿ/ನೌಕರರುಗಳ ಪೈಕಿ ಶ್ರೀ ಬಿ.ಎಸ್. ನಾರಾಯಣ ಸ್ವಾಮಿ, ಹಿಂದಿನ ತಹಶೀಲ್ದಾರ್ ಅವರು ಸೇವೆಯಿಂದ ವಯೋ ನಿವೃತ್ತಿ ಹೊಂದಿರುವುದರಿಂದ ಸಿಸಿಎ ನಿಯಮಗಳನ್ವಯ ಇವರ ಪ್ರಕರಣವನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲು ಬರುವುದಿಲ್ಲ. ಮೇಲ್ಕಂಡ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 44 ಎಸ್‌ಇಎನ್ 2004, ಬೆಂಗಳೂರು ದಿನಾಂಕ 30ನೇ ಆಗಸ್ಟ್ 2005.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಸೇವೆಯಲ್ಲಿರುವ ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಸನ್ಮಾನ್ಯ ಲೋಕಾಯುಕ್ತರ ಮೂಲಕ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

1) ಶ್ರೀ ಎಸ್. ಬಸಪ್ಪ, ಹಿಂದಿನ ತಹಶೀಲ್ದಾರ್,
2) ಶ್ರೀ ಬಿ. ಬಸಪ್ಪ, ಶಿರಸ್ತೇದಾರ,
3) ಶ್ರೀ ಬಿ.ಟಿ. ಗೌಡ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
4) ಶ್ರೀ ವಿಶ್ವನಾಥ ಟೆಕ್ಕೂರು, ಮಂಡಲ ಪಂಚಾಯಿತಿ ಕಾರ್ಯದರ್ಶಿ,
5) ಶ್ರೀ ಬಿ. ರಾಮಕೃಷ್ಣೇಗೌಡ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
6) ಶ್ರೀ ಎಸ್.ಪುಟ್ಟಸ್ವಾಮಿಗೌಡ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
7) ಶ್ರೀ ಡಿ.ಎಂ. ಕೆಂಡಗಣ್ಣಯ್ಯ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
8) ಶ್ರೀ ಡಿ. ಮನು, ಬಿಲ್ ಕಲೆಕ್ಟರ್,
9) ಶ್ರೀ ಜೆ. ಬಸವರಾಜು, ಬಿಲ್ ಕಲೆಕ್ಟರ್,
10) ಶ್ರೀ ಶ್ರೀಕಂಠಮೂರ್ತಿ, ಬಿಲ್ ಕಲೆಕ್ಟರ್,
11) ಶ್ರೀ ಬೋರೇಗೌಡ, ಬಿಲ್ ಕಲೆಕ್ಟರ್,
12) ಶ್ರೀ ಎನ್.ಪಿ. ಸಿದ್ದೇಗೌಡ, ಬಿಲ್ ಕಲೆಕ್ಟರ್,
13) ಶ್ರೀ ಎಂ.ಆರ್. ರಂಗಸ್ವಾಮಿ, ಬಿಲ್ ಕಲೆಕ್ಟರ್,
14) ಶ್ರೀ ಬಿ.ವಿ. ಕೃಷ್ಣ ಮೂರ್ತಿ, ಮಂಡಲ ಪಂಚಾಯಿತಿ ಕಾರ್ಯದರ್ಶಿ,
15) ಶ್ರೀ ಮಲ್ಲಿಕಾರ್ಜುನಯ್ಯ, ಮಂಡಲ ಪಂಚಾಯಿತಿ ಕಾರ್ಯದರ್ಶಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1254

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಪಿ.ಹೆಚ್.ಗಂಗಾಧರ್‌ರಾವ್, ನಿವೃತ್ತ ಇಂಜಿನಿಯರ್ ಇನ್ ಚೀಫ್ ಇವರ ವಿರುದ್ಧ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 97 ದಿನಾಂಕ 16.3.2000.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 97 ದಿನಾಂಕ 15.6.2004.
3) ಶ್ರೀ ಎಂ.ಎಸ್. ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರ ದಿನಾಂಕ 9.6.2005ರ ವಿಚಾರಣಾ ವರದಿ.

ಪ್ರಸ್ತಾವನೆ:

ಶ್ರೀ ಪಿ.ಹೆಚ್. ಗಂಗಾಧರ್‌ರಾವ್, ನಿವೃತ್ತ ಇಂಜಿನಿಯರ್ ಇನ್ ಚೀಫ್ ಇವರು ಈ ಹಿಂದೆ ಕೃಷ್ಣಾ ಮೇಲ್ದಂಡೆ ಯೋಜನೆ ಪುನರ್ ವಸತಿ ಮತ್ತು ಪುನರ್ ನಿರ್ಮಾಣ, ಬಾಗಲಕೋಟೆ ವೃತ್ತ ಸೂಪರಿಂಟೆಂಡಿಂಗ್ ಇಂಜಿನೀಯರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಬ್ಯಾಲಿಗಳ ಸಾಗಣಿಕೆ ಕುರಿತಂತೆ ಹೆಚ್ಚಿನ ದರದಲ್ಲಿ ಖಾಸಗಿಯವರಿಗೆ ಸಾಗಾಣಿಕೆಯನ್ನು ವಹಿಸಿ ಸರ್ಕಾರಕ್ಕೆ ಆರ್ಥಿಕ ನಷ್ಟ ಉಂಟು ಮಾಡಿದ ದುರ್ನಡತೆಯ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಲು ಶ್ರೀ ಎಸ್.ವಿ.ತಿಳ್‌ಗುಳ್, ನಿವೃತ್ತ ನ್ಯಾಯಾಧೀಶರು, ಇವರನ್ನು ಮೇಲೆ(1)ರಲ್ಲಿ ಓದಲಾದ ದಿನಾಂಕ 16.3.2000ರ ಸರ್ಕಾರಿ ಆದೇಶದಲ್ಲಿ ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದರೆ 4 ವರ್ಷಗಳ ಕಾಲ ಕಳೆದರೂ ಸಹ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸಲ್ಲಿಸದೆ ವಿಳಂಬ ಮಾಡಿದ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ 15.6.2004ರ ಆದೇಶದಲ್ಲಿ ಶ್ರೀ ಎಂ.ಎಸ್.ನಟರಾಜಮೂರ್ತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (3) ರಲ್ಲಿ ಓದಲಾದ ದಿನಾಂಕ 9.6.2005ರ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಶ್ರೀ ಸಿದ್ದೇಶ್ವರ ಟ್ರಾನ್ಸ್‌ಪೋರ್ಟ್ ಮತ್ತು ಕಾಲಕಾಲೇಶ್ವರ ಟಿಂಬರ್ ಮರ್ಚೆಂಟ್ಸ್ ರವರು ಬ್ಯಾಲಿ ಒಂದಕ್ಕೆ ರೂ.28 ರಂತೆ ದರ ಸೂಚಿಸಿದ್ದು ಅದು ಜಾಸ್ತಿ ಎಂದು ವೀರಭದ್ರೇಶ್ವರ ಮತ್ತು ರಶ್ಮಿ ಭಾರತ್ ಇವರುಗಳಿಗೆ ಒಂದು ಟ್ರಿಪ್‌ಗೆ ರೂ.6,000/- ಗಳಂತೆ ವಹಿಸಿಕೊಳ್ಳಲು ಒಪ್ಪಿರುತ್ತಾರೆಂದು ಮಹಾ ವ್ಯವಸ್ಥಾಪಕರು ತಿಳಿಸಿರುತ್ತಾರೆ, ಆದರೆ ಸದರಿಯವರಿಗೆ ಕರಾರನ್ನು ಮಾಡಿಕೊಳ್ಳಲು ಆಪಾದಿತ ಅಧಿಕಾರಿಯವರು ಪತ್ರ ಬರೆದರೆ ಅದನ್ನು ಸ್ವೀಕರಿಸದೇ ಹಿಂದಕ್ಕೆ ಕಳುಹಿಸಿರುತ್ತಾರೆಂದು ಇವರುಗಳು ಟೆಂಡರ್ ಕರೆದಾಗ ಟೆಂಡರ್ ಮಾಡಿಲ್ಲವೆಂದು ವಿಚಾರಣಾ ವರದಿಯಿಂದ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಅಧೀಕ್ಷಕ ಅಭಿಯಂತರರ ಕಛೇರಿಯಲ್ಲಿ ಕರೆದಿದ್ದ ಟೆಂಡರ್‌ನಲ್ಲಿ ಸಿದ್ಧರಾಮೇಶ್ವರ ಟ್ರಾನ್ಸ್‌ಪೋರ್ಟ್ ಮತ್ತು ಕಾಲಕಾಲೇಶ್ವರ ರವರು ಒಂದು ಬ್ಯಾಲಿಗೆ ರೂ.28ರಂತೆ ಸಾಗಾಣಿಕೆ ಮಾಡಲು ಒಪ್ಪಿಕೊಂಡಿದ್ದು ಅದನ್ನು ಅನುಮೋದನೆಗಾಗಿ ಮಹಾ ವ್ಯವಸ್ಥಾಪಕರಿಗೆ ಕಳುಹಿಸಿರುವುದು ಕಂಡು ಬರುತ್ತದೆ.

ಈ ಮಧ್ಯೆ ಆಲಮಟ್ಟಿ ರಿಸರ್‌ವಾಯರ್ ತುಂಬಿರುವುದರಿಂದ ಬ್ಯಾಲಿಗಳನ್ನು ತುರ್ತಾಗಿ ಮಾನಮನೆಯಿಂದ ಸಾಗಿ ಸಬೇಕಾದ್ದರಿಂದ ಟೆಂಡರ್ ಬಾಕಿ ಇಟ್ಟು ಹಿಂದಿನ ವರ್ಷದಲ್ಲಿ ಕ್ರಮ ತೆಗೆದುಕೊಂಡಂತೆ ಏರ್ಪಾಡು ಮಾಡುವುದಕ್ಕೆ ಕ್ರಮ ಕೈಗೊಳ್ಳಲು ಅನುಮೋದಿಸಬೇಕೆಂದು ಮಹಾ ವ್ಯವಸ್ಥಾಪಕರಿಗೆ ಬರೆದಿರುತ್ತಾರೆಂದು ಸಹ ವಿಚಾರಣಾ ವರದಿಯಿಂದ ತಿಳಿಯುತ್ತದೆ. ಆದರೆ ಇದಕ್ಕೆ ಮಹಾ ವ್ಯವಸ್ಥಾಪಕರಿಂದ ಉತ್ತರ ಬರಲಿಲ್ಲ. ಈ ಹಿನ್ನೆಲೆಯಲ್ಲಿ ಬ್ಯಾಲಿ ಒಂದಕ್ಕೆ ರೂ.54ರಂತೆ ಹಿಂದಿನ ವರ್ಷ ನೀಡಿದಂತೆ ಸಾಗಾಣಿಕೆ ಗುತ್ತಿಗೆಯನ್ನು ಆಪಾದಿತರು ನೀಡಿರುವುದು ಕಂಡು ಬರುತ್ತದೆ. ಮೇಲ್ಕಂಡ ವಾಸ್ತವಾಂಶಗಳನ್ನು ಗಣನೆಗೆ ತೆಗೆದುಕೊಂಡು ವಿಚಾರಣಾಧಿಕಾರಿಯು ಈ ಕೆಳಕಂಡಂತೆ ಅಭಿಪ್ರಾಯ ಪಟ್ಟಿರುತ್ತಾರೆ.

> "ಈ ರೀತಿ ಹಿಂದಿನ ವರ್ಷದ ವಿಧಾನ ಮತ್ತು ದರದಲ್ಲಿ ಸಾಗಾಣಿಕೆ ಮಾಡಲು ಅವರ ಹತ್ತಿರದ ಮೇಲಾಧಿಕಾರಿ ಮಹಾವ್ಯವಸ್ಥಾಪಕರಿಗೆ ತಿಳಿಸಿರುವುದು, ಅವರಿಂದ ಯಾವ ಪ್ರತಿಕ್ರಿಯೆ ಇಲ್ಲದೆ ಇರುವುದೂ, ಅದೇ ಅನುಮೋದನೆ ಎಂದು ಪರಿಗಣಿಸುವುದು ವಾಸ್ತವ ಎಂದು ಭಾವಿಸುವುದು ಸ್ವಾಭಾವಿಕ. ಪ್ರತ್ಯೇಕ ಅನುಮೋದನಾ ಆದೇಶವನ್ನು ಇಂತಹ ತುರ್ತು ಸಂದರ್ಭದಲ್ಲಿ ಅಪೇಕ್ಷಿಸಿ ಕುಳಿತು ಕೊಳ್ಳುವುದು ಜವಾಬ್ದಾರಿಯುತ ಅಧಿಕಾರಿಗೆ ಸಲ್ಲದಂತ ವಿಷಯವಾದ್ದರಿಂದ 8000 ಬ್ಯಾಲಿಗಳನ್ನು ಆಗಲೀ ಅಥವಾ ಜಾಸ್ತಿ ಬ್ಯಾಲಿಗಳನ್ನಾಗಲೀ ಸಾಗಿಸಲು ಹೊಸಮನಿಯವರಿಗೆ ವಹಿಸಿದ್ದರಲ್ಲಿ ತಪ್ಪೇನು ಇರುವುದಿಲ್ಲ. ಅಂತಹ ಏರ್ಪಾಡು ಮಾಡುವುದು ಇವರ ವ್ಯಾಪ್ತಿಯಲ್ಲಿಯೂ ಇರುತ್ತದೆ. ಈ ಎಲ್ಲಾ ಸಂದರ್ಭ ಸನ್ನಿವೇಶಗಳನ್ನು ಪರಿಗಣಿಸಿದ್ದರಿಂದ ಆಪಾದಿತರ ಮೇಲೆ ಮಾಡಿರುವ ಆಪಾದನೆ ಗಳನ್ನು ರುಜುವಾತು ಪಡಿಸುವಲ್ಲಿ ಫಿರ್ಯಾದುದಾರರು ವಿಫಲರಾಗಿರುತ್ತಾರೆಂದು ನಿರ್ಧರಿಸಿ ಆಪಾದಿತರು ತಮ್ಮ ಕರ್ತವ್ಯದಲ್ಲಿ ತಪ್ಪು ಮಾಡಿರುವುದಿಲ್ಲವೆಂದು ತೀರ್ಮಾನಿಸಿ ತೀರ್ಪನ್ನು ಕೊಡುತ್ತೇನೆಂದು ವರದಿ ಮಾಡಿದ್ದಾರೆ."

ಮೇಲ್ಕಂಡ ವಿಚಾರಣಾ ವರದಿಯನ್ನು ಲಭ್ಯವಿರುವ ಸಾಕ್ಷ್ಯಾಧಾರಗಳ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿ ಆಲಮಟ್ಟಿ ವಿಭಾಗದಲ್ಲಿ ಬ್ಯಾಲಿಗಳನ್ನು ಸಾಗಿಸಲು ಸಾಕಷ್ಟು ಟ್ರಕ್‌ಗಳು ಇದ್ದವು ಎಂಬುದಕ್ಕೆ ಆಧಾರಗಳಿಲ್ಲವೆಂಬುದು ಸ್ಪಷ್ಟಪಡುತ್ತದೆ. ಹಾಗೂ 75 ಗ್ರಾಮಗಳ 25,000 ಗ್ರಾಮಸ್ಥರಿಗೆ ಅವಶ್ಯವಿರುವ ತಾತ್ಕಾಲಿಕ ಷೆಡ್‌ಗಳನ್ನು ಮಹಾಪೂರ ಸಮೀಪಿಸುತ್ತಿದ್ದರಿಂದ ತುರ್ತಾಗಿ ನಿರ್ಮಾಣ ಮಾಡಬೇಕಾಗಿರುವ ಹಿನ್ನೆಲೆಯಲ್ಲಿ ಆಪಾದಿತರು ಮಹಾ ವ್ಯವಸ್ಥಾಪಕರಿಗೆ ಕಳುಹಿಸಿರುವ ಪ್ರಸ್ತಾವನೆಯ ಬಗ್ಗೆ ವಿಳಂಬ ಧೋರಣೆ ತಾಳಿ ತಟಸ್ಥರಾಗಿರುವುದು ಒಪ್ಪಲು ಸಾಧ್ಯವಿಲ್ಲ. ಮಹಾ ವ್ಯವಸ್ಥಾಪಕರು ಕಡಿಮೆ ದರಕ್ಕೆ ಅಂದರೆ ರೂ.28 ಗಳಿಗೆ ಸಾಗಾಣಿಕೆ ಮಾಡಲು ವೀರಭದ್ರೇಶ್ವರ ಮತ್ತು ರಶ್ಮಿ ಭಾರತ್ ಇವರುಗಳು ಒಪ್ಪಿರುತ್ತಾರೆಂದು ತಿಳಿಸಿರುವ ಸಂಸ್ಥೆಗಳು ಕರಾರನ್ನು ಮಾಡಿಕೊಳ್ಳಲು ಆಪಾದಿತರು ಬರೆದ ಪತ್ರವನ್ನು ಸ್ವೀಕರಿಸದೇ ಇರುವ ಪ್ರಸಂಗವೂ ಸಹ ಇಲ್ಲಿ ಗಣನೀಯವಾಗಿ ಪರಿಗಣಿಸಬೇಕಾದ ಅಂಶ. ಫಾರೆಸ್ಟ್ ಕಾರ್ಪೋರೇಷನ್ ರವರು ಕಡಿಮೆ ದರಕ್ಕೆ ಸಾಗಾಣಿಕೆ ಮಾಡಲು ಒಪ್ಪಿರುವ ಪತ್ರವನ್ನು ಮಂಡನಾಧಿಕಾರಿಯು ವಿಚಾರಣೆಯಲ್ಲಿ ಹಾಜರು ಪಡಿಸದೇ ಇರುವುದೂ ಸಹ ಒಂದು ಲೋಪವಾಗಿದೆ. ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ತುರ್ತು ಪರಿಸ್ಥಿತಿಗಳಲ್ಲಿ ಆಪಾದಿತರು ಅವರ ಪೂರ್ವಾಧಿಕಾರಿ ಹಿಂದಿನ ಸಾಲಿನಲ್ಲಿ ಅನುಸರಿಸಿದ ಪದ್ಧತಿಯನ್ನೇ ಮೇಲಾಧಿಕಾರಿಗಳ ಅನುಮೋದನೆಯನ್ನು ಕಾಯ್ದಿರಿಸಿ ತೆಗೆದುಕೊಂಡಿರುವ ಕ್ರಮಕ್ಕೆ ಆಪಾದಿತರಿಗೆ ಸಂದೇಹ ಲಾಭವನ್ನು ನೀಡಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 51 ಎಸ್‌ಇಎನ್ 97 ಬೆಂಗಳೂರು, ದಿನಾಂಕ 30ನೇ ಆಗಸ್ಟ್ 2005**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಶ್ರೀ ಪಿ.ಹೆಚ್.ಗಂಗಾಧರ ರಾವ್, ನಿವೃತ್ತ ಇಂಜಿನಿಯರ್ ಇನ್ ಚೀಫ್ ರವರನ್ನು ಅವರ ವಿರುದ್ಧ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸಿ ಆದೇಶಿಸುತ್ತದೆ.

ಶ್ರೀ ಪಿ.ಹೆಚ್.ಗಂಗಾಧರ ರಾವ್ ರವರು, ಈ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅಂತಹ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1252

**ವಿಷಯ:** ಶ್ರೀ ಸಿ.ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ), ಶ್ರೀ ರುದ್ರಪ್ಪ, ಕೆಎಎಸ್ (ಕಿರಿಯ ಶ್ರೇಣಿ), ಶ್ರೀ ಬಿ. ಪುಟ್ಟಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ ಹಾಗೂ ಶ್ರೀ ಜಿ.ಎ. ಜೈರಾಮರೆಡ್ಡಿ, ತಹಶೀಲ್ದಾರ್ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಅಂತಿಮ ಆದೇಶ ಹೊರಡಿಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್‌ಇಎನ್ 99 ದಿನಾಂಕ: 8.11.2001.
2) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್‌ಇಎನ್ 99 ದಿನಾಂಕ 11.2.2002.
3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್‌ಇಎನ್ 99 ದಿನಾಂಕ 23.5.2002.
4) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 86 ಎಸ್‌ಇಎನ್ 99 ದಿನಾಂಕ 20.3.2003.
5) ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಅವರ ಪತ್ರ ಸಂಖ್ಯೆ:ಲೋಕ್/ ಆರ್‌ಜಿಆರ್/ಎನ್‌ಒಎಂ/ ರೂಲ್11/03 ದಿನಾಂಕ 12.9.03.
6) ಹೆಚ್ಚುವರಿ ನಿಬಂಧಕರು ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಅವರ ದಿನಾಂಕ 2.3.05ರ ವಿಚಾರಣಾ ವರದಿ.
7) ಸರ್ಕಾರದ ನೋಟೀಸ್ ಸಂಖ್ಯೆ:ಸಿಆಸುಇ 86 ಎಸ್‌ಇಎನ್ 99 ದಿನಾಂಕ 21.3.2005.
8) ಶ್ರೀ ಸಿ.ನಾಗಯ್ಯ, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ 12.4.2005.

**ಪ್ರಸ್ತಾವನೆ:**

ಶ್ರೀ ಸಿ.ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರು, ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಉಪ ಕಾರ್ಯದರ್ಶಿ ಹುದ್ದೆಯಲ್ಲಿ, ಶ್ರೀ ರುದ್ರಪ್ಪ, ಕೆಎಎಸ್(ಕಿರಿಯ ಶ್ರೇಣಿ) ಅಧಿಕಾರಿ ಅವರು ಬೆಂಗಳೂರು ನಗರ ಜಿಲ್ಲೆಯ ವಿಶೇಷ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ, ಶ್ರೀ ಪುಟ್ಟಣ್ಣ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಅವರು ಕರ್ನಾಟಕ ಸರ್ಕಾರದ ಸಚಿವಾಲಯದ ಕಂದಾಯ ಇಲಾಖೆಯ ಸರ್ಕಾರದ ಅಧೀನ ಕಾರ್ಯದರ್ಶಿ ಹುದ್ದೆಯಲ್ಲಿ ಹಾಗೂ ಶ್ರೀ ಜಿ.ಎ.ಜೈರಾಮರೆಡ್ಡಿ ಅವರು ಬೆಂಗಳೂರು ಉತ್ತರ ತಾಲ್ಲೂಕ್ ತಹಸೀಲ್ದಾರ್ ಹುದ್ದೆಯಲ್ಲಿ ಕಾರ್ಯ ನಿರ್ವಹಿಸ್ತುತ್ತಿದ್ದಾಗ, ಕರ್ನಾಟಕ ಭೂಸ್ವಾಧೀನ ಕಾಯ್ದೆ ಅಡಿಯಲ್ಲಿ 15 ವರ್ಷಗಳ ಹಿಂದೆ ಸ್ವಾಧೀನ ಪಡಿಸಿಕೊಳ್ಳಲಾಗಿದ್ದ ಬೆಂಗಳೂರು ಉತ್ತರ ತಾಲ್ಲೂಕು ದೊಮ್ಮಲೂರು ಗ್ರಾಮದ ಜಮೀನನ್ನು ತಮಗಿಲ್ಲದ ಅಧಿಕಾರವನ್ನು ಚಲಾಯಿಸಿ ಪರಿಹಾರ ಧನ ಪಡೆದಿದ್ದ ಭೂಮಾಲೀಕರಿಂದ ಪರಿಹಾರ ಧನ ವಾಪಸ್ ಮಾಡಿಸಿಕೊಂಡು ಜಮೀನನ್ನು ಹಿಂದಿರುಗಿಸುವ ಮೂಲಕ ಸರ್ಕಾರದ ನೀತಿ ನಿಯಮಗಳನ್ನು ಉಲ್ಲಂಘಿಸಿದ ಆರೋಪದ ಸಂಬಂಧ ಮೇಲ್ಕಂಡ ಅಧಿಕಾರಿಗ ಳನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 8.11.2001ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಯಿತು. ನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ 11.2.2002ರ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಅಧಿಕಾರಿಗಳ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ವಿಚಾರಣೆ ಮಾಡಲು ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-5, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು ಹಾಗೂ ಮೇಲೆ (3)ರಲ್ಲಿ ಓದಲಾದ ದಿನಾಂಕ 23.5.2002ರ ಸರ್ಕಾರಿ ಆದೇಶದಲ್ಲಿ ಮೇಲ್ಕಂಡ ಆಪಾದಿತ ಅಧಿಕಾರಿಗಳಾದ ಶ್ರೀ ಸಿ.ನಾಗಯ್ಯ, ಶ್ರೀ ರುದ್ರಪ್ಪ, ಶ್ರೀ ಬಿ.ಪುಟ್ಟಣ್ಣ, ಶ್ರೀ ಜಿ.ಎ.ಜೈರಾಮರೆಡ್ಡಿ ಅವರುಗಳ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇರಿಸಿ ಅವರುಗಳ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಮತ್ತೆ ತೆಗೆದುಕೊಳ್ಳಲಾಯಿತು. ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಅವರು ಮೇಲೆ (5)ರಲ್ಲಿ ಓದಲಾದ ದಿನಾಂಕ 12.9.2003ರಂದು ಸರ್ಕಾರಕ್ಕೆ ಬರೆದಿರುವ ಪತ್ರದಲ್ಲಿ ಅದರಲ್ಲಿ ವಿವರಿಸಿರುವ ಕಾರಣಗಳ ಮೇರೆಗೆ ಮೇಲ್ಕಂಡ ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ವಿಚಾರಣೆ ನಡೆಸಲು ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-5, ಕರ್ನಾಟಕ ಲೋಕಾಯುಕ್ತ ಕಛೇರಿರವರ ಬದಲಾಗಿ ಅಡಿಷನಲ್ ರಿಜಿಸ್ಟ್ರಾರ್ ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಕಛೇರಿ ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (6)ರಲ್ಲಿ ಓದಲಾದ ದಿನಾಂಕ 2.3.2005ರಂದು ವಿಚಾರಣಾ ವರದಿ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಈ ಪ್ರಕರಣದಲ್ಲಿನ 4 ಮಂದಿ ಆರೋಪಿತರುಗಳ ಪೈಕಿ ಶ್ರೀ ಸಿ.ನಾಗಯ್ಯ ಅವರು ಕಂದಾಯ ಇಲಾಖೆಯ ಉಪ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಉದ್ದೇಶ ಪೂರ್ವಕವಾಗಿ ಯಾವುದೊ ಸುಳ್ಳು ಸುಪ್ರೀಂ ಕೋರ್ಟ್ ಆದೇಶವನ್ನು ಉಲ್ಲೇಖಿಸಿ ಅದರನ್ವಯ ಅಮರ ಜ್ಯೋತಿ ಗೃಹ ನಿರ್ಮಾಣ ಸಂಘಕ್ಕಾಗಿ ಸ್ವಾಧೀನ ಪಡಿಸಿಕೊಂಡಿದ್ದ ದೊಮ್ಮಲೂರು ಗ್ರಾಮದ ಸರ್ವೇ ನಂ.57/3, 58/8, 58/9, 66/9, 66/3, 68/2ರಲ್ಲಿನ ಜಮೀನು ಸೇರಿದಂತೆ ಒಟ್ಟು 38 ಎಕರೆ 29 ಗುಂಟೆ ಜಮೀನನ್ನು ಸ್ವಾಧೀನ ಪಡಿಸಿಕೊಳ್ಳಲು ಅಧಿಸೂಚನೆಯನ್ನು ಕಂದಾಯ ಇಲಾಖೆಯಲ್ಲಿ ಹೊರಡಿಸಲಾಗಿತ್ತು. ಅದರಂತೆ ಭೂಸ್ವಾಧೀನ ಪಡಿಸಿಕೊಂಡು ಸಂಬಂಧಪಟ್ಟ ಜಮೀನಿನ ಭೂಮಾಲೀಕರುಗಳಿಗೆ ಪರಿಹಾರ ಧನವನ್ನು ವಿತರಿಸಲಾಗಿತ್ತು. ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮ 1977ರ ನಿಯಮ 66 ರಿಂದ 72 ರವರೆಗೆ ನಿಗದಿಪಡಿಸಿರುವಂತೆ ಭೂಸ್ವಾಧೀನಕ್ಕೆ ಸಂಬಂಧಪಟ್ಟ ಎಲ್ಲಾ ಅಧಿಕಾರವನ್ನು ಸಂಬಂಧಪಟ್ಟ ಸಚಿವರ ಹಂತದಲ್ಲಿ ತೆಗೆದುಕೊಳ್ಳಬೇಕಾಗಿದ್ದರೂ ಸಹ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿ ಭೂಸ್ವಾಧೀನಗೊಂಡು ಭೂಮಾಲೀಕರಿಗೆ ಪರಿಹಾರ ಧನ ವಿತರಿಸಿದ ನಂತರ ಈ ರೀತಿ ಭೂಸ್ವಾಧೀನಗೊಂಡ ಜಮೀನನ್ನು ಹಿಂದಿರುಗಿಸಲು ಭೂಸ್ವಾಧೀನ ಕಾಯ್ದೆಯಲ್ಲಿ ಅವಕಾಶವಿರುವುದಿಲ್ಲ ಹಾಗೂ ಭೂಮಾಲೀಕರುಗಳು ತಮ್ಮ ಅರ್ಜಿಯಲ್ಲಿ ಉಲ್ಲೇಖಿಸಿರುವ ಎಸ್‌ಎಲ್‌ಪಿ ಸಂಖ್ಯೆ:13114/91 ಮತ್ತು 13339/91ರಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿರುವ ತೀರ್ಪು ಅರೇಹಳ್ಳಿ, ಕೊತ್ತನೂರು, ರಾಘವನಪಾಳ್ಯ, ವಸಂತಪುರ, ದೊಡ್ಡಕಲ್ಲುಸಂದ್ರದ ಜಮೀನುಗಳಿಗೆ ಅನ್ವಯಿಸುತ್ತದೆಯೇ ಹೊರತು ಅರ್ಜಿದಾರರ ದೊಮ್ಮಲೂರು ಗ್ರಾಮದ ಜಮೀನಿಗಲ್ಲದಿದ್ದರೂ ಸಹ ಆ ಪೈಕಿ ದೊಮ್ಮಲೂರು ಗ್ರಾಮದಲ್ಲಿನ 8 ಎಕರೆ 14 ಗುಂಟೆ ಜಮೀನನ್ನು ಕಾನೂನು ಬಾಹಿರವಾಗಿ ತಮಗಿಲ್ಲದ ಅಧಿಕಾರವನ್ನು ಚಲಾಯಿಸಿ ಹಿಂದಿನ ಭೂಮಾಲೀಕರಾದ ಶ್ರೀಮತಿ ಕೋಮಲಮ್ಮ ಮತ್ತು ಶ್ರೀ ರಾಜರೆಡ್ಡಿ ಅವರಿಗೆ ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೆ ಹಿಂತಿರುಗಿಸಲು ಆದೇಶ ಮಾಡಿರುತ್ತಾರೆ. ಅಧೀನ ಕಾರ್ಯದರ್ಶಿಯವರು ಪ್ರಶ್ನಿತ ಆದೇಶವನ್ನು ಹೊರಡಿಸುವುದಕ್ಕಿಂತ ಮುಂಚೆ ವಿಶೇಷ ಭೂಸ್ವಾಧೀನಾಧಿಕಾರಿಗಳ ವರದಿಯನ್ನು ಪಡೆಯುವುದು ಸೂಕ್ತವೆಂದು ಟಿಪ್ಪಣಿ ಮಾಡಿದ್ದರೂ ಸಹ ಅದರ ಅಗತ್ಯವಿಲ್ಲವೆಂದು ಅವರ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳದೆ ಕಾನೂನು ಬಾಹಿರವಾಗಿ ಹೊರಡಿಸಿರುವ ಆದೇಶದಿಂದಾಗಿ ಪ್ರಕರಣವು ನ್ಯಾಯಾಲಯದ ಮುಂದೆ ಬಂದಿರುತ್ತದೆ. ಹೀಗಾಗಿ ಅವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿವೆಯೆಂಬ ನಿರ್ಣಯ ನೀಡಿರುತ್ತಾರೆ. ಶ್ರೀ ರುದ್ರಪ್ಪ, ಶ್ರೀ ಪುಟ್ಟಣ್ಣ ಮತ್ತು

ಶ್ರೀ ಜಯರಾಮರೆಡ್ಡಿ ಅವರುಗಳು ಕೇವಲ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸಿರುವುದು ಕಂಡು ಬಂದಿರುವುದರಿಂದ ಅವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂಬ ನಿರ್ಣಯ ನೀಡಿರುತ್ತಾರೆ.

ವಿಚಾರಣಾ ವರದಿಯನ್ವಯ ಆರೋಪ ಸಾಬೀತಾಗಿರುವ ಶ್ರೀ ಸಿ.ನಾಗಯ್ಯ ಅವರಿಗೆ ಮೇಲೆ (7)ರಲ್ಲಿ ಓದಲಾದ ದಿನಾಂಕ 21.3.2005ರಂದು ವಿಚಾರಣಾ ವರದಿಯೊಡನೆ ನೋಟೀಸ್ ನೀಡಿ ವಿಚಾರಣಾ ವರದಿಯ ಕುರಿತು ಅಹವಾಲು ಏನಾದರೂ ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಅದಕ್ಕೆ ಅವರು ಮೇಲೆ (8)ರಲ್ಲಿ ಓದಲಾದ ದಿನಾಂಕ 12.4.2005ರಂದು ಉತ್ತರ ಸಲ್ಲಿಸಿ, ಅಮರ ಜ್ಯೋತಿ ವಸತಿ ಗೃಹ ನಿರ್ಮಾಣ ಸಂಸ್ಥೆಗೆ ಸೇರಿದ ಕೆಲವು ಜಮೀನುಗಳ ಸ್ವಾಧೀನ ಪ್ರಕರಣಗಳಲ್ಲಿ ಸರ್ಕಾರದ ಹಲವು ಅಧಿಕಾರಿಗಳಿಗೆ ನ್ಯಾಯಾಲಯ ನಿಂದನಾ ನೋಟೀಸ್ ಬಂದಿದ್ದು, ಸರ್ಕಾರಕ್ಕೆ ಮತ್ತೊಂದು ಸಂಕಷ್ಟ ಪರಿಸ್ಥಿತಿಯನ್ನು ತಪ್ಪಿಸುವ ದೃಷ್ಟಿಯಿಂದ ಸರ್ವೋಚ್ಛ ನ್ಯಾಯಾಲಯದ ಆದೇಶದ ಪ್ರಕಾರ ಅರ್ಜಿದಾರರಿಗೆ ಭೂಮಿಯನ್ನು ಹಿಂದಿರುಗಿಸಲು ಮತ್ತು ಈ ಸಂಬಂಧ ವಿಶೇಷ ಭೂಸ್ವಾಧೀನಾಧಿಕಾರಿಗಳ ವರದಿ ಅಗತ್ಯವಿಲ್ಲವೆಂದು ಇದರಿಂದ ವೃಥಾ ಕಾಲ ಹರಣವಾಗುತ್ತದೆಂದು ಮನಗಂಡು ಕಡತದಲ್ಲಿ ಆದೇಶಿಸಿರುತ್ತೇನೆಂದು ತಿಳಿಸಿ ಇದನ್ನು ಸರ್ಕಾರದ ಕರ್ತವ್ಯದ ಬಗ್ಗೆ Good faith ನಲ್ಲಿ ಮಾಡಿರುವುದೆಂದು ಭಾವಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿತರು ಸಲ್ಲಿಸಿದ ಉತ್ತರದ ಬೆಳಕಿನಲ್ಲಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. 1989ರ ಹಿಂದೆಯೇ ಪ್ರಶ್ನಿತ ಜಮೀನಿಗೆ ಪರಿಹಾರ ಧನವನ್ನು ನೀಡಲಾಗಿದ್ದು, ಭೂಮಾಲೀಕರು ತಮ್ಮ ಅರ್ಜಿಯಲ್ಲಿ ಉಲ್ಲೇಖಿಸಿದ ಅರ್ಜಿ ಸಂಖ್ಯೆ:13114/91 ಮತ್ತು 13339/91ರಲ್ಲಿ ನೀಡಿರುವ ತೀರ್ಪು ದೊಮ್ಮಲೂರು ಗ್ರಾಮದ ಜಮೀನಿಗೆ ಹೊರತುಪಡಿಸಲಾಗಿರುತ್ತದೆ. ಕರ್ನಾಟಕ ಸರ್ಕಾರಿ (ವ್ಯವಹಾರ ನಿರ್ವಹಣೆ) ನಿಯಮ 1977ರ ನಿಯಮ 66 ರಿಂದ 72ರಲ್ಲಿ ಭೂಸ್ವಾಧೀನದಂತಹ ಪ್ರಕರಣದಲ್ಲಿ ಸೂಕ್ತ ಕ್ರಮ ಕೈಗೊಳ್ಳಲು ಯಾರಿಗೆ ಪ್ರತ್ಯಾಯೋಜಿಸಲಾಗಿದೆಯೆಂದು ಸ್ಪಷ್ಟ ಪಡಿಸಲಾಗಿದ್ದರೂ ಸಹ ಹಾಗೂ ಸರ್ವೋಚ್ಛ ನ್ಯಾಯಾಲಯದ ತೀರ್ಪನ್ನು ಸರಿಯಾಗಿ ಅರ್ಥೈಸಿಕೊಳ್ಳದೆ ದೊಮ್ಮಲೂರು ಗ್ರಾಮದಲ್ಲಿನ 8 ಎಕರೆ 14 ಗುಂಟೆ ಜಮೀನನ್ನು ಭೂಮಾಲೀಕರುಗಳಿಗೆ ಹಿಂದಿರುಗಿಸಲು ಸಕ್ಷಮ ಪ್ರಾಧಿಕಾರದ ಅನುಮತಿಯನ್ನು ಪಡೆಯದೇ ತಮ್ಮ ಅಧಿಕಾರ ವ್ಯಾಪ್ತಿಯನ್ನು ಮೀರಿ ಕ್ಷೇತ್ರ ಅಧಿಕಾರಿಗಳಾದ ವಿಶೇಷ ಭೂಸ್ವಾಧೀನಾಧಿಕಾರಿಯವರಿಗೆ ನೇರವಾಗಿ ಅವರೇ ಆದೇಶ ನೀಡಿರುವುದರಿಂದ ಈ ಆದೇಶವು Good faith ನಲ್ಲಿ ತೆಗೆದುಕೊಂಡ ಕ್ರಮವಾಗಿರುವುದಿಲ್ಲ. ವಿಚಾರಣಾಧಿಕಾರಿಗಳು ಅವರ ಹೇಳಿಕೆಯನ್ನು ಪರಿಗಣಿಸಿ ಈಗಾಗಲೇ ಅವರ ವಾದವನ್ನು ತಿರಸ್ಕರಿಸಿರುತ್ತಾರೆ. ಕಂದಾಯ ಇಲಾಖೆಯ ಅಧೀನ ಕಾರ್ಯದರ್ಶಿಯವರು ಪ್ರಶ್ನಿತ ಆದೇಶವನ್ನು ಹೊರಡಿಸುವುದಕ್ಕಿಂತ ಮುಂಚೆ ಕ್ಷೇತ್ರ ಅಧಿಕಾರಿಯವರಾದ ವಿಶೇಷ ಭೂಸ್ವಾಧೀನಾಧಿಕಾರಿಗಳ ವರದಿಯನ್ನು ಪಡೆಯುವುದು ಸೂಕ್ತವೆಂದು ಟಿಪ್ಪಣಿ ಮಾಡಿದ್ದರೂ ಸಹ ಅದರ ಅಗತ್ಯವಿಲ್ಲವೆಂದು ಅವರ ಅಭಿಪ್ರಾಯವನ್ನು ಗಣನೆಗೆ ತೆಗೆದುಕೊಳ್ಳದೆ ಮಾಡಿರುವ ಆದೇಶವು ಭೂಮಾಲೀಕರೊಂದಿಗೆ ಅನೈತಿಕವಾಗಿ ಮಾಡಿಕೊಂಡ ಒಡಂಬಡಿಕೆಯಿಂದಾಗಿ ಆದೇಶ ಹೊರಡಿಸಲಾಗಿರುತ್ತದೆಯೇ ಹೊರತು ಯಾವುದೇ Good faith ನಲ್ಲಿ ಮಾಡಿರುವ ಕ್ರಮವೆಂದು ಪರಿಗಣಿಸಲು ಬರುವುದಿಲ್ಲ. ಈ ರೀತಿ ಅನುಚಿತ ಮತ್ತು ಕಾನೂನು ಬಾಹಿರವಾಗಿ ತೆಗೆದುಕೊಂಡ ಕ್ರಮದಿಂದ ಸರ್ಕಾರವು ಅನಗತ್ಯ ವ್ಯಾಜ್ಯದಲ್ಲಿ ಸಿಲುಕಿ ನ್ಯಾಯಾಲಯದ ಮೆಟ್ಟಿಲೇರುವ ಪ್ರಮೇಯ ಉಂಟಾಗಿರುತ್ತದೆ. ಇದರಿಂದಾಗಿ ಆರೋಪಿತ ಅಧಿಕಾರಿಯಾದ ಶ್ರೀ ಸಿ.ನಾಗಯ್ಯ ಅವರು ತಮ್ಮ ಲಿಖಿತ ಹೇಳಿಕೆಯಲ್ಲಿ ವಿಚಾರಣಾ ವರದಿಯ ಬಗ್ಗೆ ಪ್ರತಿಪಾದಿಸಿರುವ ವಾದಾಂಶಗಳನ್ನು ಒಪ್ಪದೆ ಅವರ ವಿರುದ್ಧದ ಆರೋಪಗಳು ಸಾಬೀತಾಗಿವೆಯೆಂಬ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಅವುಗಳ ಪ್ರಮಾಣಕ್ಕನುಗುಣವಾಗಿ ಸೂಕ್ತ ದಂಡನೆ ವಿಧಿಸಲು ಹಾಗೂ ಉಳಿದ ಆರೋಪಿತರುಗಳಾದ ಶ್ರೀ ರುದ್ರಪ್ಪ, ಶ್ರೀ ಪುಟ್ಟಣ್ಣ ಮತ್ತು ಶ್ರೀ ಜಿ.ಎ.ಜೈರಾಮರೆಡ್ಡಿ ಅವರುಗಳು ಕೇವಲ ಮೇಲಾಧಿಕಾರಿಗಳ ಆದೇಶವನ್ನು ಪಾಲಿಸಿರುವುದರಿಂದ ಅವರುಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು ನೀಡಿರುವ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86 ಎಸ್‌ಇಎನ್ 99 ಬೆಂಗಳೂರು ದಿನಾಂಕ 22ನೇ ಆಗಸ್ಟ್ 2005.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

1) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಸಿ.ನಾಗಯ್ಯ, ಕೆಎಎಸ್ (ಹಿರಿಯ ಶ್ರೇಣಿ) ಅಧಿಕಾರಿ ಅವರ ಮುಂದಿನ 3 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯಲು ಆದೇಶಿಸುತ್ತದೆ.

2) ಶ್ರೀ ರುದ್ರಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಬಿ.ಪುಟ್ಟಣ್ಣ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಶ್ರೀ ಜಿ.ಎ.ಜಯರಾಮರೆಡ್ಡಿ, ಹಿಂದಿನ ವಿಶೇಷ ತಹಸೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಅವರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸಿದೆ ಹಾಗೂ ಈ ಸಂಬಂಧ ಅವರುಗಳು ದಿನಾಂಕ 8.11.2001ರಿಂದ 23.5.2002 (ಎರಡೂ ದಿನಗಳು ಸೇರಿದಂತೆ) ರವರೆಗೆ ಕಳೆದ ಅಮಾನತ್ತಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 100(2)ರನ್ವಯ ಕರ್ತವ್ಯದ ಮೇಲಿನ ಅವಧಿಯೆಂದು (period spent on duty) ಪರಿಗಣಿಸಿ ಆದೇಶಿಸುತ್ತದೆ. ಶ್ರೀ ಬಿ.ಪುಟ್ಟಣ್ಣ, ನಿವೃತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಅವರಿಗೆ ಸಂಬಂಧಿಸಿದಂತೆ ಈಗಾಗಲೇ ಹೊರಡಿಸಲಾದ ಸಮಸಂಖ್ಯೆಯ ದಿನಾಂಕ 3.8.2004ರ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ.

ಶ್ರೀ ರುದ್ರಪ್ಪ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ, ಶ್ರೀ ಬಿ.ಪುಟ್ಟಣ್ಣ, ಸರ್ಕಾರದ ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ, ಶ್ರೀ ಜಿ.ಎ. ಜಯರಾಮರೆಡ್ಡಿ, ವಿಶೇಷ ತಹಸೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು ಅವರುಗಳ ವಿರುದ್ಧ ಈ ಪ್ರಕರಣದ ಮಟ್ಟಿಗೆ ವಿಚಾರಣೆ ನಡೆಯದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1219

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಟಿ.ಮಲ್ಲೇಶಪ್ಪ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಶ್ರೀ ಸಫ್ರಜ್ ಅಹ್ಮದ್, ದ್ವಿತೀಯ ದರ್ಜೆ ಸಹಾಯಕರು ಮತ್ತು ಶ್ರೀ ಬಿ.ಆರ್.ಹಿರೇಮಠ, ಗ್ರಂಥಾಲಯ ಸಹಾಯಕರು ಅವರುಗಳ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ:ಸಿಆಸುಇ 88 ಎಸ್ಇಎನ್ 2004, ದಿನಾಂಕ: 29-6-2004.
2) ಶ್ರೀ ಟಿ.ಮಲ್ಲೇಶಪ್ಪ, ನಿವೃತ್ತ ನಿರ್ದೇಶಕರು ಅವರ ದಿನಾಂಕ 31-7-2004ರ ಉತ್ತರ.
3) ಶ್ರೀ ಸಫ್ರಜ್ ಅಹ್ಮದ್, ದ್ವಿತೀಯ ದರ್ಜೆ ಸಹಾಯಕರು ಅವರ ದಿನಾಂಕ 31-7-2004ರ ಉತ್ತರ.
4) ಶ್ರೀ ಬಿ.ಆರ್.ಹಿರೇಮಠ, ಗ್ರಂಥಾಲಯ ಸಹಾಯಕರು ಅವರ ದಿನಾಂಕ 31.7.2004ರ ಉತ್ತರ.

**ಪ್ರಸ್ತಾವನೆ:**

ಶ್ರೀ ಟಿ.ಮಲ್ಲೇಶಪ್ಪ, ನಿವೃತ್ತ ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ ಹಾಗೂ ಸದರಿ ಇಲಾಖೆಯ ಸಿಬ್ಬಂದಿಯಾದ ಶ್ರೀ ಸಫ್ರಜ್ ಅಹ್ಮದ್ ಮತ್ತು ಶ್ರೀ ಹಿರೇಮಠ ಇವರು 1994-95ರ ಅವಧಿಯಲ್ಲಿ ಮಂಡಲ ಗ್ರಂಥಾಲಯಗಳಿಗೆ ಅವಶ್ಯವಿರುವ ಪುಸ್ತಕಗಳು ಮತ್ತು ಪೀಠೋಪಕರಣಗಳನ್ನು ಖರೀದಿಯಲ್ಲಿ ಎಸಗಿರುವ ದುರ್ನಡತೆಯ ಆರೋಪಗಳಿಗೆ ಶ್ರೀ ಟಿ.ಮಲ್ಲೇಶಪ್ಪ, ನಿವೃತ್ತ ನಿರ್ದೇಶಕರು, ಶ್ರೀ ಸಫ್ರಜ್ ಅಹ್ಮದ್, ದ್ವಿತೀಯ ದರ್ಜೆ ಸಹಾಯಕರು ಹಾಗೂ ಶ್ರೀ ಬಿ.ಆರ್.ಹಿರೇಮಠ, ಗ್ರಂಥಾಲಯ ಸಹಾಯಕರು ಅವರುಗಳಿಗೆ ಮೇಲೆ(1) ರಲ್ಲಿ ಓದಲಾದ ದಿನಾಂಕ: 29-6-2004ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2)(3) ಮತ್ತು (4)ರಲ್ಲಿ ಓದಲಾದ ದಿನಾಂಕ 31.7.2004ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 88 ಎಸ್ಇಎನ್ 2004 ಬೆಂಗಳೂರು ದಿನಾಂಕ: 22ನೇ ಆಗಸ್ಟ್ 2005.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರನ್ವಯ ನಿಯಮ 13ನ್ನು ಓದಿಕೊಂಡಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಸಿ.ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಇವರನ್ನು ಈ ಜಂಟಿ ಇಲಾಖಾ ವಿಚಾರಣೆಯ ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 03 ಸೇಇವಿ 96 ದಿನಾಂಕ:24-04-1998 ರಂತೆ ರೂ. 5000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ:4-3-2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಮುಖ್ಯ ಗ್ರಂಥಪಾಲಕರು, ಜಿಲ್ಲಾ ಕೇಂದ್ರ ಗ್ರಂಥಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ನಿರ್ದೇಶಕರು, ಸಾರ್ವಜನಿಕ ಗ್ರಂಥಾಲಯ ಇಲಾಖೆ, ಬೆಂಗಳೂರು ಇವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಪಿ.ಆರ್. 1220

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಜಂಟಿ ಇಲಾಖಾ ವಿಚಾರಣೆ- 1)ಶ್ರೀ ಓ. ಕಿಶನ್ ಚಂದ್, ಕೆಎಎಸ್ ಅಧಿಕಾರಿ, 2) ಶ್ರೀ ಎಂ.ಆರ್. ಕುಲಕರ್ಣಿ, ವಿಶೇಷ ತಹಶೀಲ್ದಾರ್, 3) ಶ್ರೀ ಸಿ.ಐ. ಯಾಳಗಿ, ಶಿರಸ್ತೆದಾರ್4)ಶ್ರೀ ಎಸ್.ವಿ.ಚರಂತಿಮಠ, ನಿವೃತ್ತ ಪ್ರಥಮ ದರ್ಜೆ ಸಹಾಯಕರು 5) ಶ್ರೀ ಎನ್.ಕೆ.ಬಡಿಗೇರ, ನಿವೃತ್ತ ಶಿರಸ್ತೆದಾರ್ ರವರುಗಳು-ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಎಸ್ಇಎನ್ 99 ದಿನಾಂಕ 28.2.2002.
2) ಜಿಲ್ಲಾಧಿಕಾರಿಗಳು ಬಿಜಾಪುರ ಹಾಗೂ ವಿಚಾರಣಾಧಿಕಾರಿಗಳು ಅವರ ಪತ್ರ ಸಂಖ್ಯೆ:ಆರ್‌ಬಿ/ಡಿಪಿಇ/ ಸಿಆರ್-18/01-02 ದಿನಾಂಕ 1.2.2005ರ ವಿಚಾರಣಾ ವರದಿ.
3) ನೋಟೀಸ್ ಸಂಖ್ಯೆ:ಸಿಆಸುಇ 17 ಎಸ್ಇಎನ್ 99 ದಿನಾಂಕ 21.2.2005.
4) ಶ್ರೀ ಓ.ಕಿಶನ್ ಚಂದ್, ಕೆಎಎಸ್ ಅಧಿಕಾರಿ ಅವರ ಉತ್ತರ ದಿನಾಂಕ 5.3.2005.
5) ಶ್ರೀ ಎಂ.ಆರ್. ಕುಲಕರ್ಣಿ ಅವರ ಉತ್ತರ ದಿನಾಂಕ 28.4.2005.
6) ಶ್ರೀ ಎಸ್.ವಿ. ಚರಂತಿಮಠ ಅವರ ಉತ್ತರ ದಿನಾಂಕ 28.2.2005.
7) ಶ್ರೀ ಎನ್.ಕೆ. ಬಡಿಗೇರ ಅವರ ಮಗ ರಾಜೇಶ್ ಎನ್. ಬಡಿಗೇರ ಅವರ ಉತ್ತರ ದಿನಾಂಕ 10.3.2005.

**ಪ್ರಸ್ತಾವನೆ:**

ಕೃಷ್ಣ ಮೇಲ್ದಂಡೆ ಯೋಜನೆಯ ವಿಶೇಷ ಭೂಸ್ವಾಧೀನಾಧಿಕಾರಿ, ಬಾಗಲಕೋಟೆ ಕಛೇರಿಯಲ್ಲಿ ಶ್ರೀ ಓ.ಕಿಶನ್ ಚಂದ್, ಕೆಎಎಸ್ ಅಧಿಕಾರಿ ಅವರು ವಿಶೇಷ ಭೂಸ್ವಾಧೀನಾಧಿಕಾರಿ ಹುದ್ದೆಯಲ್ಲಿ, ಶ್ರೀ ಎಂ.ಆರ್. ಕುಲಕರ್ಣಿ ಅವರು ವಿಶೇಷ ತಹಶೀಲ್ದಾರ್ ಹುದ್ದೆಯಲ್ಲಿ ಶ್ರೀ ಸಿ.ಐ. ಯಾಳಗಿ ಮತ್ತು ಶ್ರೀ ಎನ್.ಕೆ. ಬಡಿಗೇರ ಶಿರಸ್ತೆದಾರ್ ಹುದ್ದೆಯಲ್ಲಿ ಹಾಗೂ ಶ್ರೀ ಎಸ್.ವಿ.ಚರಂತಿಮಠ ಅವರು

ಪ್ರಥಮ ದರ್ಜೆ ಸಹಾಯಕರ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಭೂಸ್ವಾಧೀನ ಕಾಯ್ದೆ ಅಡಿಯಲ್ಲಿ ಭೂಸ್ವಾಧೀನ ಪಡಿಸಿಕೊಳ್ಳಲಾದ ಜಮೀನುಗಳಿಗೆ ಪರಿಹಾರ ಧನ ನಿಗಧಿಪಡಿಸಿದ ನಂತರ ಸದರಿ ಕಾಯ್ದೆಯ ಕಲಂ 18(1)ರಡಿಯಲ್ಲಿ ಹೆಚ್ಚಿನ ಪರಿಹಾರ ಕೋರಿ ಸಲ್ಲಿಸಿದಂತಹ ಮನವಿ/ಅರ್ಜಿಗಳನ್ನು ಕ್ರಮ ಬದ್ಧವಾಗಿ ನಿರ್ವಹಿಸದೇ ಮತ್ತು ಕಲಂ 12(2)ರಡಿಯಲ್ಲಿ ಜಾರಿ ಮಾಡಿದ ನೋಟೀಸುಗಳಿಗೆ ವಿಶೇಷ ವಹಿಯಲ್ಲಿ ಜಾರಿ ಮಾಡಿದ ದಿನಾಂಕವನ್ನು ನಮೂದಿಸದೆ ಅರ್ಜಿದಾರರೊಂದಿಗೆ/ಭೂಮಾಲೀಕರುಗಳೊಂದಿಗೆ ಷಾಮೀಲಾಗಿ ಸರ್ಕಾರಕ್ಕೆ ವಂಚನೆ, ಆರ್ಥಿಕ ಹಾನಿ ಮಾಡುವ ಉದ್ದೇಶದಿಂದ ವರ್ತಿಸಿದ ದುರ್ನಡತೆಯ ಆರೋಪಗಳ ಸಂಬಂಧ ಮೇಲ್ಕಂಡ ಅಧಿಕಾರಿ/ನೌಕರರುಗಳ ವಿರುದ್ಧ ವಿಚಾರಣೆ ಮಾಡಲು ಮೇಲೆ (1)ರಲ್ಲಿ ಓದಲಾದ ದಿನಾಂಕ 28.2.2002ರ ಸರ್ಕಾರಿ ಆದೇಶದಲ್ಲಿ ಬಿಜಾಪುರ ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಆದೇಶ ಹೊರಡಿಸಲಾಗಿರುತ್ತದೆ. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ 1.2.2005ರಂದು ವಿಚಾರಣಾ ವರದಿಯನ್ನು ಸಲ್ಲಿಸಿ ಈ ಕೆಳಕಂಡಂತೆ ನಿರ್ಣಯ ನೀಡಿರುತ್ತಾರೆ:

ಶ್ರೀ ಓ.ಕಿಶನ್ ಚಂದ್ ಹಾಗೂ ಕೃಷ್ಣ ಮೇಲ್ದಂಡೆ ಯೋಜನೆಯ ಕಾನೂನು ಅಧಿಕಾರಿ ಇವರುಗಳು, ವಿಶೇಷ ಭೂಸ್ವಾಧೀನಾಧಿಕಾರಿಗಳ ಕಾರ್ಯಾಲಯವನ್ನು ತಪಾಸಣೆ ಮಾಡಿ ವರದಿಯನ್ನು ಆಯುಕ್ತರು, ಪುನರ್ವಸತಿ ಮತ್ತು ಪುನರ್‌ನಿರ್ಮಾಣ, ಭೂಸ್ವಾಧೀನ, ಬಾಗಲಕೋಟೆ ಇವರಿಗೆ ಸಲ್ಲಿಸಿರುತ್ತಾರೆ. ದಿನಾಂಕ 6.1.98 ರಿಂದ 5.3.98ರವರೆಗೆ 97 ಅರ್ಜಿಗಳನ್ನು ನಂತರದಲ್ಲಿ 6.4.98ರವರೆಗಿನ ಅವಧಿಯಲ್ಲಿ 12 ಅರ್ಜಿಗಳನ್ನು ಸ್ವೀಕರಿಸಲಾಗಿದೆ. ಈ ಅರ್ಜಿಗಳನ್ನು ಕಛೇರಿಯ ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ದಾಖಲೆ ತೆಗೆದುಕೊಳ್ಳದೆಯೇ ನೇರವಾಗಿ ಕಾಯ್ದೆ ಕಲಂ18(1)ರಡಿಯಲ್ಲಿ ನಿರ್ವಹಿಸುವ ವಹಿಯಲ್ಲಿ ದಾಖಲೆ ತೆಗೆದುಕೊಳ್ಳಲಾಗಿದೆ. ಈ ಕ್ರಮವು ಕಛೇರಿಯ ಕೈಪಿಡಿಯಲ್ಲಿ ವಿವರಿಸಿದ ವಿಧಾನಗಳನ್ನು ಉಲ್ಲಂಘಿಸಿ ಕರ್ತವ್ಯಲೋಪ ಎಸಗಿ ಕಛೇರಿ ಕಾರ್ಯ ವಿಧಾನವನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದು ಸ್ಪಷ್ಟವಾಗಿದೆ. ವಿಷಯ ನಿರ್ವಾಹಕರು ಅನುಸರಿಸಿದ ಕಾರ್ಯ ವಿಧಾನವನ್ನು ಪರಿಶೀಲನೆ ಮಾಡದೆ ನೇರವಾಗಿ ಅರ್ಜಿಗಳನ್ನು 18(1)ರ ವಹಿಗೆ ದಾಖಲೆ ತೆಗೆದುಕೊಂಡಿರುವುದಕ್ಕೆ ತಮ್ಮ ಸಹಮತಿ ನೀಡಿ ತಿಂಗಳ ಅಂತ್ಯಕ್ಕೆ ಈ ವಹಿಯಲ್ಲಿಯ ಘೋಷವಾರೆಗೆ ತಮ್ಮ ಋಜು ಮಾಡಿರುವುದು ಕರ್ತವ್ಯ ಲೋಪವಾಗಿದೆ. ಇದರಿಂದ ಒಂದನೇ ಆಪಾದನೆ ಭಾಗಶ: ಸ್ಥಿರ ಪಡುತ್ತದೆ. 83 ಅರ್ಜಿಗಳನ್ನು ಸ್ವೀಕೃತಿ ವಹಿಗೆ ತೆಗೆದುಕೊಳ್ಳಲಾಗಿದೆಯೇ ಎಂಬ ಬಗ್ಗೆ ತಮ್ಮ ಅಧೀನ ಅಧಿಕಾರಿ/ಸಿಬ್ಬಂದಿ ವರ್ಗದವರನ್ನು ವಿಚಾರಣೆ ಮಾಡಿ ಪರಿಶೀಲಿಸದೆ ನೇರವಾಗಿ ಕಲಂ 18(1)ರಡಿ ನಿರ್ವಹಿಸಿದ ವಿಶೇಷ ವಹಿ ದಾಖಲೆಗೆ ತೆಗೆದುಕೊಂಡಿರುವುದನ್ನು ಪರಿಶೀಲಿಸದೆಯೇ ಕಛೇರಿ ಕಾರ್ಯವಿಧಾನವನ್ನು ಉಲ್ಲಂಘಿಸಿದ್ದು ಸ್ಪಷ್ಟವಾಗುತ್ತದೆ. ಇದರಿಂದಾಗಿ ಎರಡನೇ ಆಪಾದನೆಯು ಭಾಗಶ: ಸ್ಥಿರ ಪಡುತ್ತದೆ. ಕಲಂ 18(1)ರ ವಿಶೇಷ ವಹಿಯಲ್ಲಿಯ ಕಾಲಂ ನಂ.3 ರಲ್ಲಿ 12(2)ರನ್ವಯ ನೋಟೀಸ್ ಜಾರಿಯಾದ ದಿನಾಂಕವನ್ನು ನಮೂದಿಸದೇ ಇರುವುದು ಕಂಡು ಬರುತ್ತದೆ. ಕಾರ್ಯಾಲಯದಲ್ಲಿ ನಿರ್ವಹಿಸಲಾಗುವ ಆವಕ/ವಿಶೇಷ ವಹಿಗಳಲ್ಲಿಯ ಪ್ರತಿಯೊಂದು ಕಾಲಂನಲ್ಲಿ ನಮೂದಿಸಬೇಕಾದ ವಿವರಗಳನ್ನು ನಮೂದಿಸುವುದು ವಿಷಯ ನಿರ್ವಾಹಕರಿಂದ ಮೊದಲುಗೊಂಡು ಅವರ ಮೇಲಿರುವ ಪ್ರತಿಯೊಬ್ಬ ಅಧಿಕಾರಿ/ಸಿಬ್ಬಂದಿಯ ಹೊಣೆಗಾರಿಕೆಯಾಗಿರುತ್ತದೆ. ಈ ಲೋಪಗಳಿಗೆ ಅಧಿಕಾರಿಯೊಬ್ಬರೇ ಹೊಣೆಗಾರರು ಎಂಬುದನ್ನು ಒಪ್ಪಲಾಗದು ಇದರಲ್ಲಿಯೂ ಸಹ ಕಾರ್ಯಾಲಯದ ಕಾರ್ಯ ವಿಧಾನವನ್ನು ಉಲ್ಲಂಘಿಸಿದ್ದು, ಮೂರನೇ ಆಪಾದನೆಯು ಭಾಗಶ: ಸ್ಥಿರ ಪಡುತ್ತದೆ.

ಶ್ರೀ ಎಂ.ಆರ್. ಕುಲಕರ್ಣಿ ಅವರು ವಿಶೇಷ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಕಛೇರಿಯ ಕಾರ್ಯ ವಿಧಾನವನ್ನು ಅನುಸರಿಸುವಲ್ಲಿ ಕಾರ್ಯಾಲಯದ ಪ್ರತಿಯೊಬ್ಬ ಸಿಬ್ಬಂದಿ/ಅಧಿಕಾರಿಗಳ ಸಂಯುಕ್ತ ಹೊಣೆಗಾರಿಕೆಯಾಗಿದ್ದು, ಎಲ್ಲಾ ಅರ್ಜಿಗಳನ್ನು ಕಛೇರಿಯ ಸಾಮಾನ್ಯ ಸ್ವೀಕೃತಿ ವಹಿಯಲ್ಲಿ ದಾಖಲೆ ತೆಗೆದುಕೊಳ್ಳದೆ ಭೂಸ್ವಾಧೀನ ಕಲಂ 18(1)ರಡಿಯಲ್ಲಿ ನಿರ್ವಹಿಸುವ ವಹಿಯಲ್ಲಿ ದಾಖಲೆ ತೆಗೆದುಕೊಳ್ಳಲಾಗಿರುತ್ತದೆಂದು ಮೊದಲನೆ ಆರೋಪವು ಭಾಗಶ: ಸ್ಥಿರ ಪಡುತ್ತದೆ. ಕಾರ್ಯಾಲಯದ ಪತ್ರಾಂಕಿತ ಅಧಿಕಾರಿಯಾಗಿ ಅಧೀನ ಸಿಬ್ಬಂದಿಯ ಕಾರ್ಯ ನಿರ್ವಹಣೆಯನ್ನು ಪರಿಶೀಲಿಸುವ ಹೊಣೆಗಾರಿಕೆ ಅವರ ಮೇಲಿದ್ದು ಆದರೆ ಇದನ್ನು ಅವರು ಮಾಡದೆ ಲೋಪಕ್ಕೆ ಎಡೆಮಾಡಿಕೊಟ್ಟಿರುತ್ತಾರೆ. ಕಛೇರಿ ಸಿಬ್ಬಂದಿ ವರ್ಗದವರು ಅರ್ಜಿಗಳನ್ನು ಸಂಬಂಧಿಸಿದ ರಿಜಿಸ್ಟರ್‌ಗಳಲ್ಲಿ ಕ್ರಮಾನುಸಾರವಾಗಿ ದಾಖಲೆಗೆ ತೆಗೆದುಕೊಳ್ಳದೇ ಇದ್ದಲ್ಲಿ ಅದನ್ನು ಪರಿಶೀಲನೆ ಮಾಡದೆ ಇರುವುದು ಅವರ ಕರ್ತವ್ಯ ಲೋಪವಾಗಿರುವುದರಿಂದ ಎರಡನೇ ಆಪಾದನೆಯು ಭಾಗಶ: ಸ್ಥಿರ ಪಡುತ್ತದೆ. ಕಲಂ 18(1)ರ ವಿಶೇಷ ವಹಿಯು ಕಾಲಂ ನಂ.3ರಲ್ಲಿ ಕಲಂ 12(2)ರ ನೋಟೀಸ್ ಜಾರಿ ಮಾಡಿದ ದಿನಾಂಕವನ್ನು ನಮೂದಿಸದೆ ಇರುವುದು ಅವರ ಸಂಯುಕ್ತ ಹೊಣೆಗಾರಿಕೆಯಾಗಿರುವುದರಿಂದ ಮೂರನೆ ಆಪಾದನೆಯು ಭಾಗಶ: ಸ್ಥಿರ ಪಡುತ್ತದೆ.

ಶ್ರೀ ಸಿ.ಐ. ಯಾಳಗಿ ಅವರು ಅವರ ಆಪಾದನೆಯಲ್ಲಿ ಕಾಣಿಸಿದಂತೆ ಕರ್ತವ್ಯ ಲೋಪವೆಸಗಿದ್ದಾರೆ ಎಂಬ ಕುರಿತು ಯಾವುದೇ ಸಾಕ್ಷ್ಯಾಧಾರಗಳು ಇಲ್ಲದಿರುವುದರಿಂದ ಅವರ ಮೇಲಿನ ಮೂರು ಆಪಾದನೆಗಳು ಸಾಬೀತಾಗಿಲ್ಲವೆಂದು ನಿರ್ಣಯ ನೀಡಿರುತ್ತಾರೆ.

ಶ್ರೀ ಎಸ್.ವಿ. ಚರಂತಿಮಠ ಅವರು ಮಂಡನಾಧಿಕಾರಿಗಳ ವಾದ ಹಾಗೂ ಕಲಂ 18(1)ರಡಿ ಸ್ವೀಕೃತವಾದ ಅರ್ಜಿಗಳನ್ನು ದಾಖಲೆಗಳನ್ನು ತೆಗೆದುಕೊಳ್ಳುವ ವಹಿ ಪರಿಶೀಲಿಸಲಾಗಿ ಒಟ್ಟು 109 ಅರ್ಜಿಗಳನ್ನು ಸಾಮಾನ್ಯ ಸ್ವೀಕೃತಿ ವಹಿಗೆ ದಾಖಲೆ ತೆಗೆದುಕೊಳ್ಳದೆ ನೇರವಾಗಿ 18(1)ರ ವಿಶೇಷ ವಹಿಗೆ ದಾಖಲೆಗೆ ತೆಗೆದುಕೊಂಡ ಬಗ್ಗೆ ಕಂಡು ಬರುತ್ತದೆ. ವಹಿಯಲ್ಲಿ ನಮೂದಿಸಿರುವ ಅರ್ಜಿದಾರರ ಹೆಸರನ್ನು ಅವರು ಬರೆದಿದ್ದು ಹಾಗೂ ಘೋಷವಾರೆಯನ್ನು ತೆಗೆದಿರುವುದು ಕಂಡು ಬಂದಿರುವುದರಿಂದ ಮೊದಲನೇ ಆರೋಪ ಸ್ಥಿರ ಪಡುತ್ತದೆ. ಅವರು ಶ್ರೀ ಬಡಿಗೇರ ಅವರಿಗೆ ಯಾವುದೇ ದಾಖಲಾತಿ ಮತ್ತು ವಹಿಗಳನ್ನು ಪ್ರಭಾರದಲ್ಲಿ ವಹಿಸಿಕೊಟ್ಟಿಲ್ಲವೆಂದು ಶ್ರೀ ಬಡಿಗೇರ ಅವರು ತನಿಖಾ ಕಾಲಕ್ಕೆ ತಿಳಿಸಿದ ಬಗ್ಗೆ ಕಾನೂನು ಅಭಿಪ್ರಾಯಗಳು ದಿನಾಂಕ 2.7.98ರಂದು ಆಯುಕ್ತರಿಗೆ ಸಲ್ಲಿಸಿದ ವರದಿಯಲ್ಲಿ ತಿಳಿಸಿದ್ದಾರೆ. ದಾಖಲೆಗಳ ಪರಿಶೀಲನೆಯಿಂದ ಶ್ರೀ ಎಸ್.ವಿ. ಚರಂತಿಮಠ ಅವರೊಬ್ಬರೇ ಈ ಆಪಾದನೆಯಲ್ಲಿ ಕಾಣಿಸಿದ ಲೋಪಗಳಿಗೆ ಕಾರಣಿಭೂತರೆಂಬುದು ದೃಢಪಡುವುದಿಲ್ಲ. ಸಾಕ್ಷಿದಾರರ ಹೇಳಿಕೆಯಲ್ಲಿಯೂ ಸಹ ಸದರಿ ಆಪಾದಿತರು ಆಪಾದನೆಯಲ್ಲಿಯ ಲೋಪಗಳಿಗೆ ಸಂಪೂರ್ಣವಾಗಿ ಅವರೇ ಹೊಣೆಗಾರರು ಎಂಬ ನಿಲುವು ವಿಚಾರಣೆಯ ಯಾವ ಹಂತದಲ್ಲಿಯೂ ವ್ಯಕ್ತವಾಗಿರುವುದಿಲ್ಲ. ವಿಚಾರಣಾ ಸಮಯದಲ್ಲಿ ಶ್ರೀ ಬಡಿಗೇರ ಎಂಬ ನಿವೃತ್ತ ಶಿರಸ್ತೆದಾರರು ಪ್ರಭಾರದಲ್ಲಿನ ಅವಧಿಯಲ್ಲಿ ಈ ಪ್ರಕರಣದಲ್ಲಿ ಒಳಗೊಂಡ ವಿಷಯಗಳನ್ನು ನಿರ್ವಹಿಸಿದ ಬಗ್ಗೆ ದಾಖಲೆ ಹಾಗೂ ಸಾಕ್ಷಿಗಳ ಹೇಳಿಕೆಯಲ್ಲಿ ವ್ಯಕ್ತವಾಗುತ್ತದೆ. ಆದ್ದರಿಂದ ಆಪಾದಿತ ನೌಕರರ ಮೇಲಿನ ಎರಡನೇ ಆಪಾದನೆಯು ಪೂರ್ಣತ: ಅವರ ಮೇಲೆಯೇ ದೃಢಪಡುತ್ತದೆ

ಎಂದು ಅಭಿಪ್ರಾಯ ಪಡುವುದು ಉಚಿತವಾದುದಲ್ಲವೆಂದು ಭಾವಿಸಲಾಗಿದೆ. ಕಲಂ 18(1)ರ ವಿಶೇಷ ವಹಿಯ ಕಾಲಂ ನಂ.3ರಲ್ಲಿ ಕಲಂ 12(2)ರ ಮೇರೆಗೆ ನೋಟೀಸನ್ನು ಜಾರಿ ಮಾಡಿದ ದಿನಾಂಕವನ್ನು ವಹಿಯ ಯಾವುದೇ ಪುಟದಲ್ಲಿ ನಮೂದಿಸಿರುವುದಿಲ್ಲ. ಆದರೆ ಅವರು ತಮ್ಮ ಹೇಳಿಕೆಯಲ್ಲಿ ಸದರಿ ವಹಿಯ ಎಲ್ಲಾ ಕಾಲಂಗಳನ್ನು ಭರ್ತಿ ಮಾಡಿದ್ದೇನೆಂದು ತಿಳಿಸಿರುವುದು ಸಂಪೂರ್ಣ ಸುಳ್ಳು ಇರುತ್ತದೆ. ಈ ವಿಷಯ ಕುರಿತು ಮಂಡನಾಧಿಕಾರಿಗಳು ನೀಡಿದ ವಾದವು ಒಪ್ಪಲಾರ್ಹವಾಗಿದೆ. ಆದ್ದರಿಂದ ಅವರು ಕಾರ್ಯಾಲಯದ ಕಾರ್ಯ ವಿಧಾನವನ್ನು ಉಲ್ಲಂಘಿಸಿ ನೋಟೀಸ್ ಜಾರಿಯಾದ ದಿನಾಂಕ ಸದರಿ ವಹಿಯಲ್ಲಿ ನಮೂದಿಸದೆ ಇರುವ ಕಾರಣ ಶ್ರೀ ಚರಂತಿಮಠ ಇವರ ಮೇಲಿನ ಈ ಆಪಾದನೆಯು ದೃಢಪಡುತ್ತದೆ.

ಶ್ರೀ ಎಸ್.ಕೆ. ಬಡಿಗೇರ ಅವರು ವಿಚಾರಣೆಗೆ ಹಾಜರಾಗಿರುವುದಿಲ್ಲ. ಸಾಕ್ಷಿದಾರರ ಹೇಳಿಕೆ ಹಾಗೂ ದಾಖಲೆಗಳ ಪರಿಶೀಲನೆಯಿಂದ ಆಪಾದಿತ ನೌಕರರು 18(1)ರ ವಹಿಗಳ ನಿರ್ವಹಣೆಯನ್ನು ಮಾಡುತ್ತಿದ್ದರು ಎಂಬ ಅಂಶವು ವ್ಯಕ್ತವಾಗುತ್ತದೆ. ಕಲಂ 12(2)ರಡಿ ನೋಟೀಸ್ ಜಾರಿ ಮಾಡಿದ ದಿನಾಂಕವನ್ನು 18(1)ರ ವಿಶೇಷ ವಹಿಯ ಕಾಲಂ ನಂ.3ರಲ್ಲಿ ಆಪಾದಿತ ನೌಕರರು ನಮೂದಿಸಿರುವುದಿಲ್ಲ ಎಂಬುದನ್ನು ಸಾಕ್ಷಿದಾರರು ತಮ್ಮ ಸಾಕ್ಷಿಯಲ್ಲಿ ಹೇಳಿಕೆ ನೀಡಿರುವುದಿಲ್ಲ. ಸಾಕ್ಷಿಗಳ ಅಭಾವ, ದಾಖಲೆಗಳ ಕೊರತೆಯಿಂದ ಅವರ ಮೇಲಿನ ಎಲ್ಲಾ ಆಪಾದನೆಗಳು ಭಾಗಶ: ಸ್ಥಿರಪಡುತ್ತದೆ.

ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದರ ಪ್ರತಿಯೊಡನೆ ಶ್ರೀ ಓ.ಕಿಶನ್ ಚಂದ್, ಕೆಎಎಸ್ ಅಧಿಕಾರಿ, ಶ್ರೀ ಎ.ಆರ್.ಕುಲಕರ್ಣಿ, ವಿಶೇಷ ತಹಶೀಲ್ದಾರ್, ಶ್ರೀ ಎಸ್.ಕೆ.ಬಡಿಗೇರ, ನಿವೃತ್ತ ಶಿರಸ್ತೆದಾರ್ ಹಾಗೂ ಶ್ರೀ ಎಸ್.ವಿ. ಚರಂತಿಮಠ, ಪ್ರಥಮ ದರ್ಜೆ ಸಹಾಯಕರು ಅವರುಗಳಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ 21.2.2005ರ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಅಹವಾಲು ಏನಾದರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಯಿತು. ಈ ನೋಟೀಸಿಗೆ ಶ್ರೀ ಓ.ಕಿಶನ್ ಚಂದ್ ಅವರು ಮೇಲೆ (4)ರಲ್ಲಿ ಓದಲಾದ ದಿನಾಂಕ 5.3.2005ರಂದು ಉತ್ತರ ಸಲ್ಲಿಸಿ ತಮ್ಮ ವಿರುದ್ಧ ಮಾಡಲಾದ ಎಲ್ಲಾ ಮೂರು ಆರೋಪಗಳು ಒಂದನೇ ಆರೋಪದ ಪುನರಾವರ್ತನೆಯಾದಂತಾಗಿವೆ. ಈ ಎಲ್ಲಾ ಮೂರು ಆರೋಪಗಳು ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿಯಲ್ಲಿ ಹೆಚ್ಚಿನ ಪರಿಹಾರ ಕೋರಿ ನಿಗದಿತ ಅವಧಿ ಮೀರಿ ಸಲ್ಲಿಸಿರುವ ಅರ್ಜಿಗಳ ಬಗ್ಗೆ ಇರುತ್ತವೆ. ಈ ಎಲ್ಲಾ 3 ಆರೋಪಗಳನ್ನು ಒಂದೇ ಆರೋಪವೆಂದು ಪರಿಗಣಿಸಲು ಕೋರಿದ್ದಾರೆ. ಆರೋಪಗಳ ಬಗ್ಗೆ ತಾವು ಮಂಡಿಸಿರುವ ವಾದದ ಅಂಶಗಳನ್ನು ವಿಚಾರಣಾಧಿಕಾರಿಯವರು ಪರಿಗಣಿಸಿರುವುದಿಲ್ಲ. ಅವುಗಳು ದುರ್ನಡತೆಯ ಪದ ವ್ಯಾಪ್ತಿಯಲ್ಲಿ ಬರುವುದಿಲ್ಲ. 83 ವಿಳಂಬ ಅರ್ಜಿಗಳ ಬಗ್ಗೆ ಅರ್ಜಿದಾರರನ್ನು ವಿಚಾರಣೆಗೊಳಪಡಿಸಿ ತಮ್ಮ ಮತ್ತು ತಮ್ಮ ಸಿಬ್ಬಂದಿಯ ದುರುದ್ದೇಶವನ್ನು ಸಾಬೀತುಪಡಿಸಿದ್ದಲ್ಲಿ ಆರೋಪ ಸಾಬೀತಾಗುತ್ತಿತ್ತು. ಆರೋಪದಲ್ಲಿ ತಿಳಿಸಿರುವ ಯಾವುದೇ ಅರ್ಜಿಯನ್ನು 18(1)ರ ಅಡಿಯಲ್ಲಿ ಸಂಬಂಧಿಸಿದ ನ್ಯಾಯಾಲಯಗಳಿಗೆ ಸಲ್ಲಿಸಿರುವುದಿಲ್ಲ ಮತ್ತು ಯಾವುದೇ ಅರ್ಜಿದಾರರನ್ನು ವಿಚಾರಣೆಗೊಳಪಡಿಸದೆ ಇರುವುದರಿಂದ ಅಧೀನ ಸಿಬ್ಬಂದಿಯು ಮಾಡಿರುವ ಲೋಪಗಳಿಗೆ ತಮ್ಮನ್ನು ಹೊಣೆಗಾರರನ್ನಾಗಿ ಮಾಡಿರುವುದರಿಂದ ಈ ಎಲ್ಲಾ ಮೂರು ಆರೋಪಗಳು ಸಾಬೀತಾಗಿಲ್ಲವೆಂದು ಪರಿಗಣಿಸಬೇಕಾಗಿರುವುದರಿಂದ ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿದ್ದಾರೆ. ಶ್ರೀ ಎ.ಆರ್. ಕುಲಕರ್ಣಿ ಅವರು ಮೇಲೆ (5)ರಲ್ಲಿ ಓದಲಾದ ದಿನಾಂಕ 28.4.2005ರಂದು ಉತ್ತರ ಸಲ್ಲಿಸಿ ತಮ್ಮ ಮೇಲೆ ಮಾಡಲಾದ ಆಪಾದನೆ ಕುರಿತಂತೆ ಶ್ರೀ ಆರ್.ಎಸ್.ಲಮಾಣಿ, ಕಾನೂನು ಅಧಿಕಾರಿಗಳ ಸಾಕ್ಷಿ ಅವಶ್ಯಕತೆಯಿರುವುದಿಲ್ಲವೆಂದು ತಿಳಿಸಿ ಅವರ ಕಾಲದಲ್ಲಿ ಭೂಸ್ವಾಧೀನ ಕಲಂ 18(1)ರ ವಹಿ ಹಾಗೂ ಅರ್ಜಿಗಳ ಬಗ್ಗೆ ತಪಾಸಣೆ ಮಾಡಿ ಸಹಿ ಮಾಡಿರುತ್ತಾರೆ. ಆದರೆ ಯಾವುದೇ ನ್ಯೂನ್ಯತೆಗಳ ಬಗ್ಗೆ ವಹಿಯಲ್ಲಿ ನಮೂದಿಸಿರುವುದಿಲ್ಲ. ಅವರ ವರದಿಗಳನ್ನು ಪರಿಶೀಲಿಸಲು ವಿಚಾರಣೆ ಕಡತದಲ್ಲಿ ಲಭ್ಯವಿರುವುದಿಲ್ಲ. ಅವರು ಏನು ಸಾಕ್ಷಿ ನೀಡಿರುತ್ತಾರೆ. ಮೊದಲನೇ ಎರಡು ಕಂಡಿಕೆಗಳಲ್ಲಿ ತಮ್ಮ ಬಗ್ಗೆ ವಿವರವಾದ ಮಾಹಿತಿಯನ್ನು ನೀಡಿದ್ದು, ಅದು ವಿಚಾರಣೆಗೆ ಅವಶ್ಯಕವೆಂದು ಕಂಡು ಬರುವುದಿಲ್ಲ. ಇನ್ನು ಕೊನೆಯ ಎರಡು ಕಂಡಿಕೆಗಳಲ್ಲಿ ಎಲ್ಲಾ ಕಛೇರಿಗಳಲ್ಲಿ ಸಾಮಾನ್ಯವಾಗಿ ಇರುವ ವಿವಿಧ ಅಧಿಕಾರಿಗಳ/ಸಿಬ್ಬಂದಿಗಳ ಕರ್ತವ್ಯದ ಬಗ್ಗೆ ಹೇಳಿರುತ್ತಾರೆ. ಮಂಡನಾಧಿಕಾರಿಗಳ ವಾದ ಸರಿ ಇರುತ್ತದೆ. ವಿಚಾರಣಾಧಿಕಾರಿಗಳ ಅಭಿಪ್ರಾಯವು ಮೊದಲ ಮೂರು ಕಂಡಿಕೆಗಳು ಸರಿ ಇರುತ್ತದೆ. ಆದರೆ ಅವರ ಅಭಿಪ್ರಾಯದಂತೆ ಅಧಿಕಾರ ಹಂಚಿ ಹೋಗಿರುತ್ತದೆ ಎಂಬುದು ಸರಿಯಲ್ಲ. ಭೂಸ್ವಾಧೀನ ಶಾಖೆ ತಮಗೆ ಹೊಸತು ಇದ್ದು ಸಮುಚಿತ ಮಾರ್ಗದಲ್ಲಿ ಕಡತಗಳು ಹೋಗುತ್ತಿರಲಿಲ್ಲ. ಕಲಂ 18(1) ಹಾಗೂ 28(ಎ) ಅರ್ಜಿಗಳ ವಿಲೇವಾರಿ ಮೇಲಧಿಕಾರಿಗಳ ನಿರ್ದೇಶನದಂತೆ ತಡೆಹಿಡಿಯಲ್ಪಟ್ಟಿರುತ್ತದೆ. ಕೇವಲ 4(1), 6(1), ಜೆ.ಎಂ.ಸಿ. ಐತೀರ್ಪು ರಚಿಸುವುದು, ವೋಚರ್ ಪಡೆದು ಚೆಕ್ ಪೇಮೆಂಟ್ ಮಾಡುವುದಕ್ಕೆ ಮಾತ್ರ ಮಹತ್ವಕೊಟ್ಟು ನಿರ್ಣಯಿಸಲು ತಿಳಿಸಲಾಗಿತ್ತು. ಹೀಗಾಗಿ ಕೋರ್ಟ್ ಶಾಖೆ ಕಾರ್ಯ ಬಹಳ ಕಠಿಣ ಪರಿಸ್ಥಿತಿಯಲ್ಲಿದ್ದು ನಂತರ ಸಾರ್ವಜನಿಕರ ಒತ್ತಾಯದ ಮೇಲೆ ಹಾಗೂ ಮೇಲಾಧಿಕಾರಿಗಳ ನಿರ್ದೇಶನದಂತೆ ಈ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದುದರಿಂದ ತಮ್ಮ ಈ ಘಟನೆ ನಡೆದಿರುವುದರಿಂದ ತಮ್ಮಿಂದಾಗಿ ಯಾವುದೇ ಲೋಪವಾಗ ದಿರುವುದರಿಂದ ತಮ್ಮನ್ನು ದೋಷಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಶ್ರೀ ಎಸ್.ವಿ. ಚರಂತಿಮಠ ಅವರು ಮೇಲೆ (6) ರಲ್ಲಿ ಓದಲಾದ ದಿನಾಂಕ 28.2.2005ರಂದು ಉತ್ತರ ಸಲ್ಲಿಸಿ ಬಾಗಲಕೋಟೆ ತಾಲ್ಲೂಕಿಗೆ ಸಂಬಂಧಿಸಿದ ಎಲ್ಲಾ ಗ್ರಾಮಗಳ ಭೂಸ್ವಾಧೀನ ಪ್ರಕರಣಗಳನ್ನು ಕಲಂ 18 ಹಾಗೂ ಉಳಿದ ಎಲ್ಲಾ ಬಾಗಲಕೋಟೆ ತಾಲ್ಲೂಕಿನ ಲೆಕ್ಕಪತ್ರಗಳ ಕೆಲಸ ನಿರ್ವಹಿಸಲು ಆದೇಶ ಮಾಡಿರುತ್ತಾರೆ. ತಮ್ಮ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳು ಆಧಾರ ರಹಿತವಾಗಿದ್ದು ಅವುಗಳಲ್ಲಿ ಯಾವುದೇ ರೀತಿಯಲ್ಲಿ ಅಪರಾಧಿಯಿರುವುದಿಲ್ಲವಾದ್ದರಿಂದ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ. ಶ್ರೀ ಎಸ್.ಕೆ. ಬಡಿಗೇರ ಅವರ ಮಗ ಶ್ರೀ ರಾಜೇಶ್ ಎಸ್. ಬಡಿಗೇರ ಅವರು ಮೇಲೆ (7)ರಲ್ಲಿ ಓದಲಾದ ದಿನಾಂಕ 10.3.2005ರಂದು ಉತ್ತರ ಸಲ್ಲಿಸಿ ತಮ್ಮ ತಂದೆಯವರಾದ ಶ್ರೀ ಎಸ್.ಕೆ.ಬಡಿಗೇರ ಅವರು ನಾಲ್ಕು ವರ್ಷಗಳಿಂದ ಮಾನಸಿಕ ಅಸ್ವಸ್ಥರಾಗಿದ್ದು, ಅವರ ಬುದ್ಧಿ ಸ್ಥಿಮಿತದಲ್ಲಿಲ್ಲ, ಮಾತು ಬಿಟ್ಟು ಮಾತನಾಡುತ್ತಾರೆ. ವಿಚಾರಣೆಗೆ ಹಾಜರಾಗಲು ಸಂಪೂರ್ಣ ಅಸಮರ್ಥರಾಗಿರುವುದರಿಂದ ವಿಚಾರಣೆಗೆ ಹಾಜರಾಗಲು ಸಾಧ್ಯವಾಗಿಲ್ಲವೆಂದು ತಿಳಿಸಿರುತ್ತಾರೆ.

ಮೇಲ್ಕಂಡ ಆರೋಪಿತ ಅಧಿಕಾರಿ/ನೌಕರರು ಸಲ್ಲಿಸಿರುವ ಲಿಖಿತ ಉತ್ತರಗಳನ್ನು ವಿಚಾರಣಾ ವರದಿಯೊಂದಿಗೆ ಮತ್ತೊಮ್ಮೆ ಪರಿಶೀಲಿಸಲಾಯಿತು. ಕಛೇರಿ ಕಾರ್ಯ ವಿಧಾನವನ್ನು ಉಲ್ಲಂಘಿಸಿ ಹೆಚ್ಚುವರಿ ಭೂ ಪರಿಹಾರಕ್ಕಾಗಿ ಬಂದ ಅರ್ಜಿಗಳನ್ನು ದುರುದ್ದೇಶ ಪೂರ್ವಕವಾಗಿ ಕಲಂ 18(1)ರ ವಿಶೇಷ ವಹಿಯಲ್ಲಿ ನೇರವಾಗಿ ದಾಖಲಿಸಿಕೊಂಡಿರುವ ಆರೋಪಗಳಾಗಿವೆ. ಈ ದುರ್ನಡತೆಯ ಬಗ್ಗೆ ಯಾರ ಪಾತ್ರ ಎಷ್ಟು ಎಂದು ಖಚಿತವಾಗಿ ಮೂಡಿಬಂದಿಲ್ಲ. ಈ ಉಲ್ಲಂಘನೆಯು ವಿಷಯ ನಿರ್ವಾಹಕರಿಂದ ಮೊದಲುಗೊಂಡು

ತಹಶೀಲ್ದಾರರವರೆಗೆ ಹೊಣೆ ಗಾರಿಕೆಯು ಹಂಚಿ ಹೋಗಿದ್ದು ಅಂತಿಮವಾಗಿ ಮೇಲಾಧಿಕಾರಿಯವರು ಜವಾಬ್ದಾರರಾಗಿರುತ್ತಾರೆ ಎಂದು ವಿಚಾರಣಾ ವರದಿಯಿಂದ ತಿಳಿದು ಬರುತ್ತದೆ. ತಹಶೀಲ್ದಾರ್ ಮತ್ತು ಕೆಳಗಿನ ಹಂತದ ಸಿಬ್ಬಂದಿಯು ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿ ನೀಡಿ ದುರ್ನಡತೆಯ ಜವಾಬ್ದಾರರಾಗಿರುವ ಸಾಧ್ಯತೆಗಳಿಗೆ ಈ ಪ್ರಕರಣದಲ್ಲಿ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟದ ಆಪಾದನೆ ಇರುವುದಿಲ್ಲ. ವಿಚಾರಣಾ ವರದಿಯಲ್ಲಿನ ಈ ಎಲ್ಲಾ ಅಂಶಗಳನ್ನು ಸರ್ಕಾರವು ಪರಿಶೀಲಿಸಿರುತ್ತದೆ. ಶ್ರೀ ಓ.ಕಿಶನ್ ಚಂದ್, ಕೆಎಎಸ್ ಅಧಿಕಾರಿ ಅವರು ಸಲ್ಲಿಸಿರುವ ಉತ್ತರದಲ್ಲಿ ಮನಗಾಣುವಂತಹ ಅಂಶಗಳು ಇರುವುದಿಲ್ಲ. ಅವರ ಪಾತ್ರ ನೇರವಾಗಿದೆಯೇ ಎಂಬುದನ್ನು ವಿಚಾರಣೆಯಲ್ಲಿ ಸಮರ್ಪಕವಾಗಿ ಮೂಡಿ ಬರದೇ ಇದ್ದರೂ ಸಹ ಅವರು ಎಸಗಿರುವ ದುರ್ನಡತೆಯು ಅಳಿಸಿ ಹೋಗುವುದಿಲ್ಲ. ಶ್ರೀ ಎಂ.ಆರ್. ಕುಲಕರ್ಣಿ, ವಿಶೇಷ ತಹಶೀಲ್ದಾರ್ ಅವರು ಕಛೇರಿ ಕಾರ್ಯ ವಿಧಾನವನ್ನು ಉಲ್ಲಂಘಿಸಿ ಮೇಲಾಧಿಕಾರಿಗಳಿಗೆ ತಪ್ಪು ಮಾಹಿತಿ ನೀಡುವಲ್ಲಿ ಅವರದು ಹೆಚ್ಚಿನ ಪಾತ್ರ ಇರುವುದು ಖಚಿತವಾಗಿರುವುದರಿಂದ ಅವರ ಉತ್ತರವನ್ನು ಪರಿಗಣಿಸಲು ಸಾಧ್ಯವಿಲ್ಲ. ಶ್ರೀ ಎಸ್.ವಿ.ಚರಂತಿಮಠ ಮತ್ತು ಶ್ರೀ ಎನ್.ಕೆ.ಬಡಿಗೇರ ಅವರುಗಳ ದುರ್ನಡತೆಯು ಕ್ರಮವಾಗಿ ಋಜುವಾತಾಗಿದೆಯೆಂದು ಮತ್ತು ಭಾಗಶ: ಋಜುವಾತಾಗಿದೆಯೆಂದು ವಿಚಾರಣಾ ವರದಿಯಲ್ಲಿ ತಿಳಿಸಿರುತ್ತದೆ. ಇದನ್ನು ಅವರ ಉತ್ತರದೊಂದಿಗೆ ಪರಿಶೀಲಿಸಲಾಗಿದ್ದು ಹಾಗೂ ಈ ಇಬ್ಬರೂ ನೌಕರರು 2000ನೇ ಸಾಲಿನಲ್ಲಿ ನಿವೃತ್ತರಾಗಿರುವುದರಿಂದ ಮತ್ತು ಶ್ರೀ ಎನ್.ಕೆ.ಬಡಿಗೇರ ಅವರು ಅಸ್ವಸ್ಥರಾಗಿದ್ದು, ಬುದ್ದಿ ಸ್ಥಿಮಿತದಲ್ಲಿಲ್ಲವೆಂದು ಅವರ ಮಗ ಹೇಳಿಕೆ ನೀಡಿರುವುದರಿಂದ ಅವರುಗಳು ಎಸಗಿರುವ ದುರ್ನಡತೆಯು ಸಣ್ಣ ಲೋಪವಾಗಿ ರುವುದರಿಂದ ಅವರುಗಳ ಮಟ್ಟಿಗೆ ವಿಚಾರಣಾಧಿಕಾರಿ ನೀಡಿರುವ ವರದಿಯನ್ನು ಒಪ್ಪದೆ ಇರಲು ತೀರ್ಮಾನಿಸಲಾಗಿದೆ. ಉಳಿದಂತೆ ಶ್ರೀ ಸಿ.ಐ. ಯಾಳಗಿ ಅವರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲವೆಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಲಾಗಿ ರುತ್ತದೆ. ಈ ಎಲ್ಲಾ ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಶ್ರೀ ಓ. ಕಿಶನ್ ಚಂದ್, ಶ್ರೀ ಎಂ.ಆರ್.ಕುಲಕರ್ಣಿ ಅವರುಗಳಿಗೆ ಸೂಕ್ತ ದಂಡನೆಯನ್ನು, ಶ್ರೀ ಎನ್.ಕೆ.ಬಡಿಗೇರ ಮತ್ತು ಶ್ರೀ ಎಸ್.ವಿ. ಚರಂತಿಮಠ ಅವರುಗಳಿಗೆ ಸಂಬಂಧಿಸಿದಂತೆ ವಿಚಾರಣಾ ವರದಿಯನ್ನು ಒಪ್ಪದೆ ಅವರುಗಳ ಹಾಗೂ ಶ್ರೀ ಸಿ.ಐ.ಯಾಳಗಿ ಅವರ ವಿಷಯದಲ್ಲಿ ವಿಚಾರಣಾ ವರದಿಯನ್ನು ಒಪ್ಪಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 17 ಎಸ್ಇಎನ್ 99, ಬೆಂಗಳೂರು, ದಿನಾಂಕ: 4ನೇ ಆಗಸ್ಟ್ 2005.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

1) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಓ.ಕಿಶನ್ ಚಂದ್, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ಅವರ ಮುಂದಿನ ಒಂದು ವಾರ್ಷಿಕ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯಲು ಆದೇಶಿಸುತ್ತದೆ.

2) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ.ಆರ್. ಕುಲಕರ್ಣಿ, ವಿಶೇಷ ತಹಶೀಲ್ದಾರ್ ಅವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆ ಹಿಡಿಯಲು ಆದೇಶಿಸುತ್ತದೆ.

3) ಶ್ರೀ ಸಿ.ಐ.ಯಾಳಗಿ, ಶಿರಸ್ತೆದಾರ್, ಶ್ರೀ ಎನ್.ಕೆ.ಬಡಿಗೇರ, ನಿವೃತ್ತ ಶಿರಸ್ತೆದಾರ್ ಮತ್ತು ಶ್ರೀ ಎಸ್.ವಿ. ಚರಂತಿಮಠ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರುಗಳ ವಿರುದ್ಧ ಮಾಡಲಾದ ಆರೋಪಗಳಿಂದ ಆರೋಪ ಮುಕ್ತರನ್ನಾಗಿಸಿದೆ.

ಶ್ರೀ ಸಿ.ಐ.ಯಾಳಗಿ, ಶಿರಸ್ತೆದಾರ್, ಶ್ರೀ ಎನ್.ಕೆ.ಬಡಿಗೇರ, ನಿವೃತ್ತ ಶಿರಸ್ತೆದಾರ್ ಮತ್ತು ಶ್ರೀ ಎಸ್.ವಿ.ಚರಂತಿಮಠ, ನಿವೃತ್ತ ಪ್ರಥಮ ದರ್ಜೆ ಸಹಾಯಕರು ಅವರುಗಳು ಮಟ್ಟಿಗೆ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

ಪಿ.ಆರ್. 1184

**ವಿಷಯ:** ಶ್ರೀ ಬಿ.ಕೆ. ಶ್ರೀನಿವಾಸರಾವ್, ಅಧೀನ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯರವರಿಂದ ದಂಡನೆ ವಿಧಿಸಿದ ಸರ್ಕಾರಿ ಆದೇಶದ ವಿರುದ್ಧ ಸನ್ಮಾನ್ಯ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಕೆ- ಹಾಗೂ ಮೇಲ್ಮನವಿ ವಜಾ ಮಾಡಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 104 ಎಸ್ಇಎನ್ 96, ದಿನಾಂಕ 31.12.2004.

2) ಶ್ರೀ ಬಿ.ಕೆ. ಶ್ರೀನಿವಾಸರಾವ್ ರವರ ದಿನಾಂಕ 18.6.2005ರ ಮೇಲ್ಮನವಿ.

3) ಕೆ.ಎ.ಟಿ ಆದೇಶ ಸಂಖ್ಯೆ:187/2005 ದಿನಾಂಕ 30.5.05.

**ಪ್ರಸ್ತಾವನೆ:** ಶ್ರೀ ಬಿ.ಕೆ.ಶ್ರೀನಿವಾಸರಾವ್, ಕರ್ನಾಟಕ ಸರ್ಕಾರದ ಸಚಿವಾಲಯ ಸೇವೆಗೆ ಸೇರಿದ ಅಧೀನ ಕಾರ್ಯದರ್ಶಿರವರು 1991 ರಿಂದ 1996ರವರೆಗೆ ಶಾಖಾಧಿಕಾರಿಯಾಗಿದ್ದ ಅವಧಿಯಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯ ಉಪಹಾರ ಮಂದಿರದಲ್ಲಿ ವ್ಯವಸ್ಥಾಪಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ 1994-95ರ ಅವಧಿಯಲ್ಲಿ ಕಾಫೀ, ಟೀ ಮತ್ತು ತಿಂಡಿ ಪದಾರ್ಥಗಳ ಮುಂಗಡ ಪುಸ್ತಕ ಬಾಬ್ತು ರೂ.3.29 ಲಕ್ಷ ಹಣವನ್ನು ಉಪಹಾರ ಮಂದಿರದ ಲೆಕ್ಕಕ್ಕೆ ಜಮಾ ಮಾಡದೆ ದುರುಪಯೋಗಪಡಿಸಿಕೊಂಡಿರುವ ಆರೋಪಕ್ಕಾಗಿ ಇಲಾಖಾ ವಿಚಾರಣೆ ನಡೆಸಿ ಅವರ ಮೇಲಿನ ಎರಡೂ ಆರೋಪಗಳು ಸಾಬೀತಾದ್ದರಿಂದ ಮೇಲೆ (1)ರಲ್ಲಿ ಓದಲಾದ ದಿನಾಂಕ 31.12.2004ರ ಸರ್ಕಾರಿ ಆದೇಶದಲ್ಲಿ ಇವರನ್ನು ಕೆ.ಸಿ.ಎಸ್ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 8(vi)ರ ಅನ್ವಯ ತಕ್ಷಣದಿಂದ ಅನ್ವಯವಾಗುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ಹಾಗೂ ಇವರ ನಿವೃತ್ತಿ

ಸೌಲಭ್ಯಗಳಿಂದ ಸರ್ಕಾರಕ್ಕೆ ಉಂಟಾದ ನಷ್ಟ ರೂ.3.29 ಲಕ್ಷವನ್ನು (ಮೂರು ಲಕ್ಷದ ಇಪ್ಪತ್ತೊಂಬತ್ತು ಸಾವಿರ ಮಾತ್ರ) ವಸೂಲಿ ಮಾಡಲು ಸಹ ಆದೇಶಿಸಲಾಗಿತ್ತು. ಈ ಬಗ್ಗೆ ಶ್ರೀ ಬಿ.ಕೆ.ಶ್ರೀನಿವಾಸರಾವ್ ರವರು ಕೆ.ಸಿ.ಎಸ್ (ಸಿ.ಸಿ.ಎ) ನಿಯಮಾವಳಿ 1957ರ ನಿಯಮ 18 ರಂತೆ ಸನ್ಮಾನ್ಯ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸುವ ಬದಲಾಗಿ, ಕೆ.ಎ.ಟಿ ಅರ್ಜಿ ಸಂಖ್ಯೆ:7172/2004 ರಲ್ಲಿ ಇಲಾಖಾ ವಿಚಾರಣಾ ವರದಿಯ ವಿರುದ್ಧ ಅರ್ಜಿ ಸಲ್ಲಿಸಿದ್ದರು. ನಂತರ ಕೆ.ಎ.ಟಿ.ಯಲ್ಲಿನ ತಮ್ಮ ಅರ್ಜಿಯನ್ನು ಸ್ವಯಂ ಪ್ರೇರಣೆಯಿಂದ ಹಿಂಪಡೆದ ನಿಮಿತ್ತ ಗೌರವಾನ್ವಿತ ನ್ಯಾಯಮಂಡಳಿಯು ದಿನಾಂಕ 30.5.2005ರ ತನ್ನ ಆದೇಶದಲ್ಲಿ ಈ ಅರ್ಜಿಯನ್ನು ರದ್ದುಗೊಳಿಸಿದೆ.

ನಂತರ ಶ್ರೀ ಬಿ.ಕೆ. ಶ್ರೀನಿವಾಸರಾವ್ ರವರು ಮೇಲೆ (2)ರಲ್ಲಿ ಓದಲಾದ ದಿನಾಂಕ 18.6.2005ರ ಮೇಲ್ಮನವಿಯನ್ನು ಗೌರವಾನ್ವಿತ ರಾಜ್ಯಪಾಲರಿಗೆ ಸಲ್ಲಿಸಿರುತ್ತಾರೆ. ಹಾಗೂ ಈ ಬಗ್ಗೆ ಆದ ಕಾಲ ವಿಳಂಬವನ್ನು ಮನ್ನಿಸಲು ಮತ್ತು ತಮ್ಮ ಮೇಲೆ ವಿಧಿಸಿದ ದಂಡನೆಯನ್ನು ರದ್ದು ಪಡಿಸಲು ಕೋರಿದ್ದಾರೆ. ಶ್ರೀಯುತರು ಸಲ್ಲಿಸಿದ ಮೇಲ್ಮನವಿ ಮತ್ತು ತತ್ಸಂಬಂಧ ಶಿಸ್ತು ಪ್ರಾಧಿಕಾರಿಯ ಪರಿಶೀಲನಾ ಟಿಪ್ಪಣಿಯನ್ನು ಈ ಕೆಳಕಂಡಂತೆ ಮೇಲ್ಮನವಿ ಪ್ರಾಧಿಕಾರಕ್ಕೆ ಸಲ್ಲಿಸಲಾಗಿತ್ತು.

| Appeal | Remarks |
|---|---|
| 1) This appeal is preferred against the impunged order passed by the Respondent in Government Order No.DPAR 104 SEN 96 dated 31.12.2004 imposing a penalty of-<br>i) compulsory retirement from service;and<br>ii) ordering recovery of Rs.3.29 lakhs towards loss stated to have been caused to the canteen.<br>2) The facts of the case:- (1) The appellant was working in the capacity of Under Secretary in the dept. of Planning and Statistics till 31.12.2004 the date of the impunged order through which he was compulsorily retired from service.<br>(2) The KGS Canteen has been functioning since 1978 as a welfare measure to the secretariat staff. The said canteen was managed by an official committee headed by an officer of the rank of Deputy Secretary or above as its Chairman and an Under Secretary as Secretary of the canteen with officers of various levels, as members of committee. Besides this, the following staff were drafted to look after the day affairs of the canteen on behalf of the committee:- (a) Manager (from the cadre of SO)-1. (b) Assistant Manager (from the cadre of Senior Assistant)-1 (c) Accountant (from the cadre of Assistant)-1 (d) Junior Assistant-1; and (e) Typist-1.<br>3) The staff provided to the canteen were to work under the supervision, guidance and orders of the canteen committee. The committee sits once in every month for scrutiny of the accounts of the canteen. It is the responsibility of the manager to place all the relevant vouchers, bills, receipts and records pertaining to the accounts of the previous month and get it approved by the committee. The canteen functions on no loss and no profit basis.<br>4) The appellant worked as manager of the said canteen from 19.4.91 to 5.6.96. During his tenure as manager he has placed all relevant records and accounts pertaining to the canteen every month before the committee without any objection or queries. The appellant relinquished the office of the manger of the canteen on 5.6.96. Consequent to his promotion as Under Secretary and handed over charge of the manager to the Assistant Manager (One Sri. Rajanna). The charge was made over through CTC as was done earlier. The in charge manager discharged duties till the new incumbent (One Sri. Papayya Raju) took over on | In these paras the Appellant has explained the service particulars, functioning of the canteen, the charges made against him and his remarks on the charges, enquiry report etc. All these contentions have been considered both by the Enquiry Officer and the Disciplinary Authority.<br>The alleged misappropriation of funds has been got investigated through the sub-committee and Audit Inspection by the State Accounts Department. Both these investigations have confirmed that a sum of Rs.3.29lakhs, which is the sale proceeds of advance coupons is not remitted into the bank. The Appellant instead of proving that the said amount has been credited to the bank with proper documentary evidence is trying to find fault with the Enquiry and other procedures. His claim that he was not called by the Committee while conducting inspection is not tenable, since it was not mandatory to seek the opinion or clarification of the Appellant while conducting the inspection. His argument that he handed over charge on 5.6.96 to one Sri. Rajanna after his transfer is not correct. The Canteen Committee had issued a notice to the Appellant on 12.8.1996 asking him to hand over the charge for which he has not replied at all. He has failed to hand over the books of accounts, registers, coupons, cash book etc, in a proper manner. Therefore, all his arguments in these paras are not sustainable. |

